ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ

# ವಾರ್ತಾಪತ್ರ

(ತ್ರೈಮಾಸಿಕ ಪತ್ರಿಕೆ)




ಸಂಪುಟ : ೦೬
ಸಂಚಿಕೆ : ೧೫ ೧೫ (ಖಾಸಗಿ ಪ್ರಸಾರಕ್ಕಾಗಿ ಮಾತ್ರ) ಜುಲೈ – ಅಕ್ಟೋಬರ್ ೨೦೧೦

ಸಂಪಾದಕರು
ಎಸ್.ವಿ. ಶ್ರೀನಿವಾಸರಾವ್



**ಪರಿವಿಡಿ**



*ವಿಳಾಸ*
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
**ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ**
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭/೨೬೬೭೬೭೭೩
ಇಮೇಲ್: bmsritrust@gmail.com
*ಶಾಖೆ*
ಬಿ.ಎಂ.ಶ್ರೀ. ಶತಮಾನೋತ್ಸವ ಭವನ
ಬೆಳ್ಳೂರು, ನಾಗಮಂಗಲ ತಾ||, ಮಂಡ್ಯ ಜಿಲ್ಲೆ

# ಹಾರ್ದಿಕ ಅಭಿನಂದನೆಗಳು ಹಾಗೂ ಹೃತ್ಪೂರ್ವಕ ಶುಭಾಶಯಗಳು

ದಿನಾಂಕ: ೨೩–೧೦–೨೦೧೦ರಂದು ನಡೆದ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯಲ್ಲಿ ಅವಿರೋಧವಾಗಿ ಪ್ರೊ. ಡಿ. ಲಿಂಗಯ್ಯ ಅವರು ಪ್ರತಿಷ್ಠಾನದ ಅಧ್ಯಕ್ಷರಾಗಿ ಆಯ್ಕೆಗೊಂಡಿದ್ದಾರೆ. ಅವರಿಗೆ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿ ಹಾಗೂ ಸರ್ವ ಸದಸ್ಯರೂ ಅಭಿನಂದನೆ ಹಾಗೂ ಶುಭಾಶಯ ಸಲ್ಲಿಸುತ್ತಿದ್ದಾರೆ.

ಮಂಡ್ಯ ಜಿಲ್ಲೆಯ ಪೀಹಳ್ಳಿಯಲ್ಲಿ ದಿನಾಂಕ: ೧೬–೧೨–೧೯೩೪ರಂದು ಜನಿಸಿದ ಪ್ರೊ. ಡಿ. ಲಿಂಗಯ್ಯ ಅವರು ಬಹುಮುಖ ಪ್ರತಿಭಾವಂತರು. ಶ್ರೀಯುತರು ಬೆಂಗಳೂರಿನ ವಿ.ವಿ. ಪುರಂ, ಕಲೆ ಮತ್ತು ವಾಣಿಜ್ಯ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿ ನಿವೃತ್ತರಾಗಿರುತ್ತಾರೆ. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕಾರ್ಯದರ್ಶಿಯಾಗಿಯೂ ಸ್ತುತ್ಯರ್ಹ ಸೇವೆ ಸಲ್ಲಿಸಿ ವಿದ್ಯಾರ್ಥಿಗಳ ಹಾಗೂ ಸಾಹಿತ್ಯ ಪ್ರೇಮಿಗಳ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಕೆಲವು ವರ್ಷಗಳ ಹಿಂದೆ ಶ್ರೀಯುತರು ಪ್ರತಿಷ್ಠಾನದಲ್ಲಿ ಕೋಶಾಧಿಕಾರಿಯಾಗಿದ್ದರು. ಜಾನಪದ ಸಾಹಿತ್ಯ ಕ್ಷೇತ್ರದಲ್ಲಿ ಪ್ರಶಂಸಾರ್ಹ ಸೇವೆಯನ್ನು ಮಾಡಿರುತ್ತಾರೆ. ಇವರು ರಾಜ್ಯೋತ್ಸವ ಪ್ರಶಸ್ತಿ, ದೇವರಾಜ ಬಹದ್ದೂರ್ ಬಹುಮಾನ, ಸಾಹಿತ್ಯ ಅಕಾಡೆಮಿಯ ಬಹುಮಾನ, ರಮಣಶ್ರೀ ಶರಣಪ್ರಶಸ್ತಿ, ಚುಂಚಶ್ರೀ ಪ್ರಶಸ್ತಿ, ಡಾ. ಸಿಂಪಿಲಿಂಗಣ್ಣ ಪ್ರತಿಷ್ಠಾನ ಪ್ರಶಸ್ತಿ. ವಿದ್ಯಾವರ್ಧಕ ಸಂಘದ ಬಹುಮಾನ, ಚುಟುಕು ಭೂಷಣ ಪ್ರಶಸ್ತಿ, ಮುಂತಾದ ಪ್ರಶಸ್ತಿ/ಪುರಸ್ಕಾರಗಳಿಗೆ ಭಾಜನರಾಗಿದ್ದಾರೆ.

**ಇವರು ರಚಿಸಿರುವ ಮುಖ್ಯ ಕೃತಿಗಳು** : ಕರ್ನಾಟಕ ಜಾನಪದ ಕಾವ್ಯಗಳು; ಬಯಲು ಸೀಮೆಯ ಜನಪದ ಕಾವ್ಯಗಳು; ಅಂತರಂಗದ ಹಾಡು; ವೀಕ್ಷಕ, ಚುಟಕಾಂಜಲಿ, ಬಡತನದ ಬಾಳು; ದಡ್ಡಶಿಖಾಮಣಿ, ಕಾವ್ಯಾಸ್ವಾದನ, ಕನ್ನಡರಥಿಕರು; ಬೆಳ್ಳಾವೆ ವೆಂಕಟನಾರಾಣಪ್ಪ; ಮಣ್ಣಿನ ಮಿಡಿತ; ಜನಪದ ಕಥಾ ಸಂಗಮ; ರಣಕಾಟಿಗಳು, ಆಟಿಕೆ, ಬೋರೇ ದೇವರು, ಜನಪರ ಕಥಾಸಂಗಮ, ಜನಪರ ಶೋಧನ, ಶಿವಪುರ ಧ್ವಜ ಸತ್ಯಾಗ್ರಹ, ರಾಜಕೀಯಪಟು; ಬಿ.ಎಂ.ಶ್ರೀಕಂಠಯ್ಯ ಮುಂತಾಗಿ ೫೦ಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ಸಾಹಿತ್ಯ ಕ್ಷೇತ್ರಕ್ಕೆ ನೀಡಿರುತ್ತಾರೆ.

ಕೋಶಾಧಿಕಾರಿಯಾಗಿ ಆಯ್ಕೆಗೊಂಡಿರುವ ಶ್ರೀ ಎಂ.ಎಸ್. ರಾಮಪ್ರಸಾದ್ (ಪ್ರೊ|| ಎಂ.ವಿ.ಸೀ. ಅವರ ಪುತ್ರರು) ಅವರಿಗೂ ಹಾರ್ದಿಕ ಅಭಿನಂದನೆಗಳು ಹಾಗೂ ಶುಭಾಶಯಗಳು.

# ಸಂಪಾದಕೀಯ

೦೯-೦೯-೨೦೦೯ರಂದು ವಿದ್ಯುಕ್ತವಾಗಿ ಪ್ರಾರಂಭಗೊಂಡ ಪ್ರೊ. ಎಂ.ವಿ. ಸೀತಾರಾಮಯ್ಯ ಜನ್ಮಶತಮಾನೋತ್ಸವ ಕಾರ್ಯಾಚರಣೆಗಳು ೦೯-೦೯-೨೦೧೦ರಂದು ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಅದ್ದೂರಿಯಾಗಿ ನಡೆದ ಸಮಾರೋಪ ಸಮಾರಂಭದೊಡನೆ ಸಾಂಕೇತಿಕವಾಗಿ ಮುಕ್ತಾಯಗೊಂಡಿದೆ. ರಾಜ್ಯಾದ್ಯಂತಾ ೬೦ಕ್ಕೂ ಹೆಚ್ಚು ವಿಚಾರಪೂರ್ಣ ಹಾಗೂ ವೈವಿಧ್ಯಪೂರ್ಣ ಕಾರ್ಯಕ್ರಮಗಳು ಹಾಗೂ ಪ್ರಾಚೀನ ಹಸ್ತಪ್ರತಿ ಪ್ರದರ್ಶನ ನಡೆದು ಕನ್ನಡಾಭಿಮಾನಿಗಳಲ್ಲಿ ನವಜಾಗೃತಿ ಯನ್ನುಂಟುಮಾಡಿದೆ. ಎಂ.ವಿ.ಸೀ. ಅವರ ಸಾಹಿತ್ಯಿಕ, ಸಾಂಸ್ಕೃತಿಕ ಹಾಗೂ ನಾಡು-ನುಡಿಗೆ ಸಂಬಂಧಿಸಿದ ಜನಪರ-ಜನಹಿತ ಕಾರ್ಯಗಳ ವಿಸ್ತೃತ ಪರಿಚಯ ಮೂಡಿಸುವಲ್ಲಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಯಶಸ್ವಿಯಾಗಿದೆ. ಇದಕ್ಕೆ ಸಹಕರಿಸಿದ ಸಂಘ-ಸಂಸ್ಥೆಗಳು, ಅಭಿಮಾನಿ ವರ್ಗಕ್ಕೆ ಪ್ರತಿಷ್ಠಾನ ಆಭಾರಿಯಾಗಿದೆ. ಅವರೆಲ್ಲರಿಗೂ ನಮ್ಮ ಪ್ರೀತಿಪೂರ್ಣ ಮೆಚ್ಚುಗೆ ಸಹ ಸಲ್ಲುತ್ತದೆ.

ಈ ಖ್ಯಾತ ಸಾಹಿತಿ ಪ್ರೊ. ಎಂ.ವಿ.ಸೀತಾರಾಮಯ್ಯನವರ ಜನ್ಮಶತಮಾನೋತ್ಸವ ಕಾರ್ಯಕ್ರಮಗಳನ್ನು ನಡೆಸಲು ರಾಜ್ಯಾದ್ಯಂತ ಇನ್ನೂ ಹಲವಾರು ಸಂಘ ಸಂಸ್ಥೆಗಳು ಮುಂದಾಗಿರುವುದರಿಂದ ಈ ಅಭಿಯಾನವನ್ನು ೨೦೧೧ರ ಮಾರ್ಚ್ ವರೆಗೂ ಮುಂದುವರಿಸಲು ಎಂ.ವಿ.ಸೀ. ಜನ್ಮಶತಮಾನೋತ್ಸವ ಸಮಿತಿ ಒಪ್ಪಿಗೆ ಸೂಚಿಸಿದೆ ಎಂದು ಅಭಿಮಾನಿಗಳ ಗಮನಕ್ಕೆ ತರಲು ಹರ್ಷಿಸುತ್ತೇವೆ.

ಕರ್ನಾಟಕದ ಅತ್ಯಂತ ಜನಪ್ರಿಯ ಮಾನ್ಯ ಮುಖ್ಯಮಂತ್ರಿ ಡಾ. ಬಿ.ಎಸ್. ಯಡ್ಯೂರಪ್ಪ ಅವರು ತಮ್ಮ ಅಗಣಿತ ಜವಾಬ್ದಾರಿಯಡಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯ ನಿರ್ವಹಣೆಯನ್ನು ಯಶಸ್ವಿಯಾಗಿ ನಿರ್ವಹಿಸಿ ಅಭೂತ ಪೂರ್ವ ರೀತಿಯಲ್ಲಿ ನೆರವು ನೀಡಿ ಎಲ್ಲಾ ಕನ್ನಡಾಭಿಮಾನಿಗಳ ಮೆಚ್ಚುಗೆ ಹಾಗೂ ಗೌರವಕ್ಕೆ ಪಾತ್ರರಾಗಿದ್ದಾರೆ. ನಮ್ಮ **ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಕಾರ್ಯಯೋಜನೆಗಳನ್ನು ಮೆಚ್ಚಿ ಬಹಳ ವಿಶ್ವಾಸದಿಂದ ೫೦ ಲಕ್ಷ ರೂಪಾಯಿ ಅನುದಾನವನ್ನು ಎರಡು ಕಂತುಗಳಲ್ಲಿ ನೀಡುವುದಾಗಿ ದಿನಾಂಕ: ೧೬-೧೨-೨೦೦೯ರಂದು, ಪ್ರತಿಷ್ಠಾನದ ವಿದ್ವಾಂಸರುಗಳ ನಿಯೋಗ ಭೇಟಿಯಾದಾಗ ಘೋಷಿಸಿ ಅದನ್ನೇ ಕಾರ್ಯಗತಗೊಳಿಸಲು ಅಧಿಕಾರಿಗಳಿಗೆ ಆದೇಶಿಸಿದ್ದನ್ನು ಪ್ರತಿಷ್ಠಾನ ಕೃತಜ್ಞತೆಯಿಂದ ನೆನೆಯುತ್ತದೆ. ಪ್ರಮುಖ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ವಹಣೆ ಇದೀಗ ಸುಸಂಸ್ಕೃತರೂ, ಸಾಹಿತ್ಯ ಮತ್ತು ಸಂಸ್ಕೃತಿ ಕಾರ್ಯಚಟುವಟಿಕೆಗಳಲ್ಲಿ ಅಪಾರ ಕಾಳಜಿಯಿರುವ ಸನ್ಮಾನ್ಯ ಶ್ರೀ ಗೋವಿಂದ ಎಂ. ಕಾರಜೋಳ ಅವರ ಕೈ ಸೇರಿದೆ. ಇವರಿಗೆ ಪ್ರತಿಷ್ಠಾನ ಅತ್ಯಂತ ಗೌರವದಿಂದ ಹಾರ್ದಿಕ ಅಭಿನಂದನೆ ಅರ್ಪಿಸುತ್ತಾ, ಇವರು ಹಮ್ಮಿಕೊಳ್ಳುವ ಎಲ್ಲಾ ಜನಹಿತ ಕಾರ್ಯ ಚಟುವಟಿಕೆಗಳಿಗೂ ಪೂರ್ಣ ಯಶಸ್ಸು ದೊರೆಯಲಿ ಎಂದು ಆಶಿಸುತ್ತಾ ಹೃತ್ಪೂರ್ವಕವಾಗಿ ಶುಭಾಶಯ ಕೋರುತ್ತಿದೆ.** ಸನ್ಮಾನ್ಯ ಈ ಸಚಿವರು ಮುಖ್ಯಮಂತ್ರಿಗಳು ಘೋಷಿಸಿರುವ ೫೦ ಲಕ್ಷ ರೂಪಾಯಿ ಅನುದಾನ ಬಿಡುಗಡೆ ಮಾಡುವ ಆದೇಶ ಶೀಘ್ರವೇ ಹೊರಡಿಸಿ, ಪ್ರತಿಷ್ಠಾನದ ಕಾರ್ಯಚಟುವಟಿಕೆಗಳು ಯಶಸ್ವಿಯಾಗಿ ಕಾರ್ಯಗತಗೊಳ್ಳಲು ಅನುವು ನೀಡಿ ಉಪಕರಿಸಬೇಕೆಂದು ಪ್ರತಿಷ್ಠಾನದ ಗೌ॥ ಅಧ್ಯಕ್ಷರಾದ ನಾಡೋಜ ಜಿ. ನಾರಾಯಣ ಹಾಗೂ ಪ್ರತಿಷ್ಠಾನದ ನೂತನ ಅಧ್ಯಕ್ಷರಾದ ಪ್ರೊ. ಡಿ. ಲಿಂಗಯ್ಯ ಅವರು ವಿನಂತಿಸಿಕೊಳ್ಳುತ್ತಿದ್ದಾರೆ.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಸರ್ವರಿಗೂ ರಾಜ್ಯೋತ್ಸವ ಮತ್ತು ದೀಪಾವಳಿಯ ಹಾರ್ದಿಕ ಶುಭಾಶಯ ಸಲ್ಲಿಸುತ್ತಿದೆ.

■ ***ಎಸ್.ವಿ. ಶ್ರೀನಿವಾಸರಾವ್***
ಸಂಪಾದಕರು

### ಪ್ರಕಟಣೆ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ, ದೈನಂದಿನ ಕಾರ್ಯಕ್ರಮಗಳನ್ನು ವ್ಯವಸ್ಥಿತವಾಗಿ ನಡೆಸುವ ಸಾಮರ್ಥ್ಯವಿರುವ ಸಹಾಯಕರೊಬ್ಬರ ಅವಶ್ಯಕತೆ ಇರುತ್ತದೆ.

**ಅರ್ಹತೆ :** ಕೊನೆಯ ಪಕ್ಷ ಎಸ್.ಎಸ್.ಎಲ್.ಸಿ ಪಾಸಾಗಿರಬೇಕು. ಹೆಚ್ಚಿನ ವಿದ್ಯೆ ಗಳಿಸಿರುವವರಿಗೆ ಆದ್ಯತೆ ನೀಡಲಾಗುವುದು. ಇವರು ಅವಶ್ಯ ಒಂದು ವಾಹನವನ್ನು ಹೊಂದಿರಬೇಕು. ಕಚೇರಿ ವೇಳೆ ೧೨.೦೦ ರಿಂದ ೮.೦೦ (ಬಿಡುವು ಅರ್ಧಗಂಟೆ). ಹೆಚ್ಚಿನ ವಿವರಗಳಿಗೆ ಪ್ರತಿಷ್ಠಾನವನ್ನು ಸಂಪರ್ಕಿಸಬಹುದಾಗಿದೆ.

# ಪ್ರತಿಷ್ಠಾನದ ವಾರ್ತೆ

## ಎನ್. ಅನಂತರಂಗಾಚಾರ್ ಸ್ಮಾರಕ ದತ್ತಿ ಕಾರ್ಯಕ್ರಮ

ದಿನಾಂಕ: ೦೬-೦೭-೨೦೧೦ ಸಂಜೆ ೫-೩೦ ಗಂಟೆಗೆ ಏರ್ಪಡಿಸಲಾಗಿದ್ದ ಕಾರ್ಯಕ್ರಮದಲ್ಲಿ ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀಗಳು ಅಧ್ಯಕ್ಷತೆ ವಹಿಸಿದ್ದರು. ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, ಕುಲಪತಿಗಳು ಸಂಸ್ಕೃತ ವಿಶ್ವವಿದ್ಯಾಲಯ ಇವರು 'ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತ' ಗ್ರಂಥ ಲೋಕಾರ್ಪಣೆಗೊಳಿಸಿದರು. ಈ ಗ್ರಂಥದ ಬಗ್ಗೆ, ಡಾ. ನಾ.ಕೃ. ರಾಮಶೇಷನ್ ಪರಿಚಯಾತ್ಮಕ ಭಾಷಣ ಮಾಡಿದರು. ಈ ಕಾರ್ಯಕ್ರಮದಲ್ಲಿ ನಾಡೋಜ ಜಿ. ನಾರಾಯಣ ಉಪಸ್ಥಿತರಿದ್ದರು. ಡಾ. ನಾ. ಗೀತಾಚಾರ್ಯ




ಸ್ವಾಗತ ಭಾಷಣ ಮಾಡಿ ಕಾರ್ಯಕ್ರಮವನ್ನು ನಿರೂಪಿಸಿದರು. ಶ್ರೀ ಎಸ್.ವಿ. ಶ್ರೀನಿವಾಸರಾವ್ ವಂದನಾರ್ಪಣೆ ಮಾಡಿದರು.

**ಸಿ.ಕೆ. ನಾಗರಾಜರಾವ್ ಸ್ಮಾರಕ ದತ್ತಿ ಉಪನ್ಯಾಸ** : ದಿನಾಂಕ: ೧೭-೦೭-೨೦೧೦ರಂದು ಸಂಜೆ ೫-೩೦ಕ್ಕೆ ಈ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಖ್ಯಾತ ಲೇಖಕ ಡಾ. ಸೂರ್ಯನಾಥ ಕಾಮತ್ ಅಧ್ಯಕ್ಷತೆ ವಹಿಸಿ ಸಿ.ಕೆ. ನಾಗರಾಜ್‌ರವರ ಬಹುಮುಖ ಪ್ರತಿಭೆಯ ಮೇಲೆ ಬೆಳಕು ಚೆಲ್ಲಿ ಅವರ ಸಾಹಿತ್ಯ ಕೊಡುಗೆಗಳನ್ನು ಪ್ರಶಂಸಿದರು. ಕನ್ನಡದಲ್ಲಿ ಐತಿಹಾಸಿಕ ಕಾದಂಬರಿಗಳ ಬಗ್ಗೆ ಸಿಂಧಿ ಕಾಲೇಜಿನ ಕನ್ನಡ ಉನ್ಯಾಸಕ ಡಾ. ಕೆ. ರಮಾನಂದ ಅವರು ಕನ್ನಡ ಸಾಹಿತ್ಯದಲ್ಲಿ ಚಾರಿತ್ರಿಕ ಕಾದಂಬರಿಗಳ ಪಾತ್ರಗಳ ಬಗ್ಗೆ ವಿಮರ್ಶಾತ್ಮಕ ಪರಿಚಯ ಮಾಡಿಸುತ್ತಾ, ಶ್ರೀ ಸಿ.ಕೆ. ನಾಗರಾಜ್‌ರವರ ಮುಖ್ಯ ಕಾದಂಬರಿಗಳನ್ನೂ ಪರಿಚಯಿಸಿದರು. ನಾಡೋಜ ಜಿ. ನಾರಾಯಣ ಉಪಸ್ಥಿತರಿದ್ದರು. ಪ್ರಾರಂಭದಲ್ಲಿ ಶ್ರೀ ಎಸ್.ವಿ. ಶ್ರೀನಿವಾಸರಾವ್‌ರವರು ಸಿ.ಕೆ. ನಾಗರಾಜ ರಾವ್‌ರವರನ್ನು ಪರಿಚಯಿಸಿ ಅತಿಥಿಗಳನ್ನೂ, ಸಿ. ಕೆ. ನಾಗರಾಜ ರಾವ್‌ರವರ ಬಂಧುವರ್ಗ ಹಾಗೂ ಸಭಿಕರನ್ನು ಸ್ವಾಗತಿಸಿದರು. ಪ್ರಾಸ್ತಾವಿಕ ಭಾಷಣ ಮಾಡಿದ ಡಾ. ನಾ. ಗೀತಾಚಾರ್ಯ ದತ್ತಿ ಕಾರ್ಯಕ್ರಮಗಳ ವೈಶಿಷ್ಟ್ಯವನ್ನು ವಿವರಿಸಿ ದತ್ತಿ ದಾನಿಗಳಾದ ದಿವಂಗತ ಶ್ರೀಮತಿ ರಾಜಾಮಣಿ ನಾಗರಾಜರಾವ್ ಮತ್ತು ಮಕ್ಕಳ ಸಾಹಿತ್ಯಾಸಕ್ತಿಯನ್ನು ಸ್ತುತಿಸಿದರು.

**'ಸಿರಿ ಸಂಗೀತ' ತಿಂಗಳ ಸಾಂಸ್ಕೃತಿಕ ಕಾರ್ಯಕ್ರಮ, ದಾಸರ ಕೀರ್ತನೆಗಳು** : ದಿನಾಂಕ: ೦೯-೦೭-೨೦೧೦ರಂದು ಸಂಜೆ ನಾಡೋಜ ಜಿ. ನಾರಾಯಣ ಅವರ ಅಧ್ಯಕ್ಷತೆಯಲ್ಲಿ ಈ ಕಾರ್ಯಕ್ರಮ ನಡೆಯಿತು. ಡಾ. ಪದ್ಮಶ್ರೀ ಅವರು ಸುಶ್ರಾವ್ಯವಾಗಿ ಗಾಯನ ಕಾರ್ಯಕ್ರಮ ನಡೆಸಿಕೊಟ್ಟರು. ತಬಲದಲ್ಲಿ ವಿದ್ವಾನ್ ಶ್ರೀ ಆರ್. ನಾಗರಾಜ್, ಪಿಟೀಲು ವಿದ್ವಾಂಸ ಶ್ರೀ ವಿ.ಎಸ್. ರಾಘವೇಂದ್ರ ಸಂಗೀತ ಕಾರ್ಯಕ್ರಮಕ್ಕೆ ಸಹಯೋಗ ನೀಡಿದರು. ಡಾ. ನಾ. ಗೀತಾಚಾರ್ಯ ಕಾರ್ಯಕ್ರಮ ನಿರೂಪಿಸಿ ಸರ್ವರನ್ನೂ ಸ್ವಾಗತಿಸಿದರು. ಕಾರ್ಯಕ್ರಮದ ಕೊನೆಯಲ್ಲಿ ಶ್ರೀ ಎಸ್.ವಿ. ಶ್ರೀನಿವಾಸರಾವ್ ವಂದನೆ ಸಲ್ಲಿಸಿದರು.

## ಎಂ.ವಿ.ಸೀ. ಶತಮಾನೋತ್ಸವ ಕಾರ್ಯಕ್ರಮಗಳು

**ದಿನಾಂಕ : ೦೯-೦೭-೨೦೧೦ ಶುಕ್ರವಾರ** ಸಂಜೆ ೫-೩೦ರಂದು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬನಶಂಕರಿ ಸಾಂಸ್ಕೃತಿಕ ಸಂಘದ ಸಹಯೋಗದೊಡನೆ ೧೧ನೇ ಶತಮಾನೋತ್ಸವ ಉಪನ್ಯಾಸಮಾಲೆ ಕಾರ್ಯಕ್ರಮನ್ನು ನಡೆಸಿತು. ಸುಪ್ರಸಿದ್ಧ ಸಾಹಿತಿ ಡಾ. ಸುಮತೀಂದ್ರ ನಾಡಿಗ ಅವರು ಅಧ್ಯಕ್ಷತೆ ವಹಿಸಿದ್ದರು. 'ಎಂ.ವಿ.ಸೀ. ಅವರ ಕಥಾ ಸಾಹಿತ್ಯ' ಕುರಿತು ಡಾ. ಮುಳುಕುಂಟೆ ರಮೇಶ್ ಅವರು ವಿಸ್ತೃತ ವಿವರಣೆ ನೀಡಿದರು. ಪ್ರತಿಷ್ಠಾನದ ಅಧ್ಯಕ್ಷ ಡಾ. ಜಿ. ನಾರಾಯಣ ವೇದಿಕೆಯ ಮೇಲೆ ಉಪಸ್ಥಿತರಿದ್ದರು. ಬನಶಂಕರಿ ಸಾಂಸ್ಕೃತಿಕ ಸಂಘದ ಅಧ್ಯಕ್ಷ ಶ್ರೀ ಎಸ್.ವಿ. ಶ್ರೀನಿವಾಸರಾವ್ ಬನಶಂಕರಿ ಸಾಂಸ್ಕೃತಿಕ ಸಂಘದ ಕಿರು ಪರಿಚಯ ಮಾಡಿಸಿ ಅತಿಥಿಗಳ ಪರಿಚಯ ಮಾಡಿಸಿ, ಸರ್ವರನ್ನು ಸ್ವಾಗತಿಸಿದರು. ಡಾ. ನಾ. ಗೀತಾಚಾರ್ಯ ಕಾರ್ಯಕ್ರಮ ನಿರೂಪಿಸಿದರು. ಉಪನ್ಯಾಸ ಕಾರ್ಯಕ್ರಮ ಮುಗಿದ ನಂತರ ಬನಶಂಕರಿ ಸಾಂಸ್ಕೃತಿಕ ಸಂಘದ ಮಹಿಳಾ ವಿಭಾಗದಿಂದ ಸಿರಿಸಂಗೀತ – ದಾಸರ ಕೀರ್ತನೆಗಳು ನಡೆದವು. ಬನಶಂಕರಿ ಸಾಂಸ್ಕೃತಿಕ ಸಂಘದ ಕಾರ್ಯದರ್ಶಿ ಶ್ರೀ ಹುಚ್ಚಯ್ಯ ವಂದನಾರ್ಪಣೆ ಮಾಡಿದರು. ಕಾರ್ಯಕ್ರಮಗಳ ಜೊತೆಜೊತೆಯಲ್ಲೇ ಪ್ರಾಚೀನ ಹಸ್ತಪ್ರತಿಗಳ ಪ್ರದರ್ಶನವನ್ನು ಪ್ರತಿಷ್ಠಾನದ ಮೊದಲನೆಯ ಮಹಡಿಯಲ್ಲಿ ಏರ್ಪಡಿಸಲಾಗಿತ್ತು.

**ದಿನಾಂಕ: ೧೯-೦೭-೨೦೧೦ರಂದು ಶಿವಮೊಗ್ಗದ ಕರ್ನಾಟಕ ಸಂಘದಲ್ಲಿ ಎಂ.ವಿ.ಸೀ. ಶತಮಾನೋತ್ಸವ ಕಾರ್ಯಕ್ರಮ ಹಾಗೂ ಹಸ್ತಪ್ರತಿಗಳ ಪ್ರದರ್ಶನ ನಡೆಯಿತು.** ಡಾ. ತೀ. ನಂ.ಶಂಕರನಾರಾಯಣ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಕರ್ನಾಟಕ ಸಂಘದ ಕಾರ್ಯದರ್ಶಿ ಶ್ರೀ ಉದಯ ನಾರಾಯಣ ಶಾಸ್ತ್ರೀರವರು ಬೆಂಗಳೂರಿನಿಂದ ಬಂದಿದ್ದ ಅತಿಥಿಗಳನ್ನು ಸ್ವಾಗತಿಸಿದರು. ಡಾ. ನಾ. ಗೀತಾಚಾರ್ಯ ಎಂ.ವಿ.ಸೀ. ಅವರ ಬದುಕು ಬರಹ ಕುರಿತು; ಶ್ರೀ ಎಸ್.ವಿ. ಶ್ರೀನಿವಾಸರಾವ್‌ರು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಕಾರ್ಯ ಚಟುವಟಿಕೆಗಳ ಬಗ್ಗೆ; ಪ್ರತಿಷ್ಠಾನದ ಖಜಾಂಚಿ ಹಾಗೂ ಎಂ.ವಿ.ಸೀ. ಅವರ ಪುತ್ರರಾದ ಶ್ರೀ ಎಸ್.ಟಿ. ರಾಧಾಕೃಷ್ಣ 'ನಾ ಕಂಡಂತೆ ನನ್ನ ತಂದೆ' ಎಂಬ ವಿಷಯ ಕುರಿತು ಭಾಷಣ ಮಾಡಿದರು.

ದಿನಾಂಕ: ೨೦-೦೭-೨೦೧೦ ಮಂಗಳವಾರ ಶಿವಮೊಗ್ಗದ ಸಹ್ಯಾದ್ರಿ ಕಾಲೇಜಿನ (ಕುವೆಂಪು ವಿಶ್ವವಿದ್ಯಾಲಯ) ಸಹಯೋಗದಲ್ಲಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಎಂ.ವಿ.ಸೀ ಜನ್ಮಶತಮಾನೋತ್ಸವ ಕಾರ್ಯಕ್ರಮ ಏರ್ಪಡಿಸಿತ್ತು. ಸಹ್ಯಾದ್ರಿ ಕಾಲೇಜಿನ ಪ್ರಾಂಶುಪಾಲ ಪ್ರೊ. ಸುಗುಣ ಅಧ್ಯಕ್ಷತೆ ವಹಿಸಿದ್ದರು, ಬೆಂಗಳೂರಿನಿಂದ ಶಿವಮೊಗ್ಗಕ್ಕೆ ಹೋಗಿದ್ದ ಡಾ. ನಾ. ಗೀತಾಚಾರ್ಯ ಎಂ.ವಿ.ಸೀ.



ಜೀವನ ಕುರಿತು, ಶ್ರೀ ಎಸ್.ವಿ. ಶ್ರೀನಿವಾಸರಾವ್ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಕುರಿತು; ಶ್ರೀ ಎಸ್.ಟಿ. ರಾಧಾಕೃಷ್ಣ (ಎಂ.ವಿ.ಸೀ. ಅವರ ಪುತ್ರರು) 'ನಾ ಕಂಡಂತೆ ನನ್ನ ತಂದೆ' ಕುರಿತು ಭಾಷಣ ಮಾಡಿದರು. ಅಧ್ಯಕ್ಷ ಡಾ. ಸುಗುಣ ರವರು ಅಧ್ಯಕ್ಷ ಭಾಷಣ ಮಾಡಿ, ಬೆಂಗಳೂರಿನಿಂದ ಆಗಮಿಸಿ ಕಾರ್ಯಕ್ರಮ ನಡೆಸಿದ ಅತಿಥಿಗಳಿಗೆ ಸಹ್ಯಾದ್ರಿ ಕಾಲೇಜಿನ ಕನ್ನಡವಿಭಾಗದ ಮುಖ್ಯಸ್ಥರು ಕೃತಜ್ಞತೆ ಅರ್ಪಿಸಿದರು.

ದಿನಾಂಕ : ೨೭-೦೭-೨೦೧೦ ಭಾನುವಾರ ಬೆಳಿಗ್ಗೆ ಮಲ್ಲೇಶ್ವರದ ಹಿರಿಯ ನಾಗರಿಕರ ಸಂಘ; ಬಿ.ಎಂ.ಶ್ರೀ. ಸ್ಮಾರಕ ಸಹಯೋಗದೊಂದಿಗೆ ಎಂ.ವಿ.ಸೀ. ಜನ್ಮ ಶತಮಾನೋತ್ಸವ ಕಾರ್ಯಕ್ರಮವನ್ನು ಆಯೋಜಿಸಿತ್ತು. ಹಿರಿಯ ನಾಗರಿಕರ ಸಂಘದ ಅಧ್ಯಕ್ಷ ಶ್ರೀ ಎಸ್.ಕೆ. ಮೋಹನ್ ಅಧ್ಯಕ್ಷತೆ ವಹಿಸಿದ್ದರು. ಡಾ. ನಾ. ಗೀತಾಚಾರ್ಯ ಅವರು ಎಂ.ವಿ.ಸೀ. ಅವರ ಬದುಕು-ಬರಹದ ಬಗ್ಗೆ ಹಾಗೂ ಹಸ್ತಪ್ರತಿಗಳ ಸಂರಕ್ಷಣೆ, ಸಂಪಾದನೆ ಬಗ್ಗೆ ವಿದ್ವತ್‌ಪೂರ್ಣ ಭಾಷಣ ಮಾಡಿದರು.

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಕೆಂಗೇರಿ ಉಪನಗರ ಸ್ನೇಹಕೂಟ ಸಾಂಸ್ಕೃತಿಕ ವೇದಿಕೆ ಸಹಯೋಗದೊಡನೆ ದಿನಾಂಕ: ೦೯-೦೮-೨೦೧೦ ಸಂಜೆ ೫-೩೦ಕ್ಕೆ ೧೧ನೇ ಉಪನ್ಯಾಸ ಮಾಲೆ ಕಾರ್ಯಕ್ರಮವನ್ನು ನಡೆಸಿತು.** ಕುವೆಂಪು ವಿಶ್ವವಿದ್ಯಾಲಯ ಶಿವಮೊಗ್ಗದ ನಿವೃತ್ತ ಕನ್ನಡ ಪ್ರಾಧ್ಯಾಪಕ ಡಾ. ತೀ. ನಂ. ಶಂಕರನಾರಾಯಣ ಅಧ್ಯಕ್ಷತೆ ವಹಿಸಿದ್ದರು. ಡಾ. ಕೆ. ಆರ್. ಗಣೇಶ್ ಎಂ.ವಿ.ಸೀ. ಅವರ ವಿದ್ವತ್ ಪ್ರಪಂಚವನ್ನು ಪರಿಚಯಿಸಿದರು. ಕನ್ನಡ ಪ್ರಾಧ್ಯಾಪಕ ಡಾ.ಎಸ್.ಎಚ್. ಭುವನೇಶ್ವರ್ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಅಧ್ಯಕ್ಷತೆ ವಹಿಸಿದ್ದ ಡಾ. ತೀ. ನಂ. ಶಂಕರನಾರಾಯಣ ಅವರು ಎಂ.ವಿ.ಸೀ. ಅವರ ವಿದ್ವತ್ ಕೃತಿಗಳ ಪರಾಮರ್ಶೆ ನಡೆಸಿ, ಅವರ ಸಂಶೋಧನಾ ಪ್ರವೃತ್ತಿಯನ್ನು ಪ್ರಶಂಸಿದರು. ಕಾರ್ಯಕ್ರಮದ ಪ್ರಾರಂಭದಲ್ಲಿ ಶ್ರೀ ಎಸ್.ವಿ. ಶ್ರೀನಿವಾಸರಾವ್‌ರವರು ಎಲ್ಲಾ ಅತಿಥಿಗಳನ್ನು ಪರಿಚಯಿಸಿ, ಸರ್ವರನ್ನೂ ಸ್ವಾಗತಿಸಿದರು. ಡಾ. ನಾ. ಗೀತಾಚಾರ್ಯ ಕಾರ್ಯಕ್ರಮ ನಿರೂಪಿಸಿದರು. ಸ್ನೇಹಕೂಟದ ಶ್ರೀ ಆರ್. ವಾದಿರಾಜ್ ವಂದನಾರ್ಪಣೆ ಮಾಡಿದರು. ಕಾರ್ಯಕ್ರಮದಲ್ಲಿ ಪ್ರತಿಷ್ಠಾನದ ಅಧ್ಯಕ್ಷ ಡಾ. ಜಿ. ನಾರಾಯಣ ಉಪಸ್ಥಿತರಿದ್ದರು.

ದಿನಾಂಕ : ೨೧-೦೮-೨೦೧೦ ಶನಿವಾರ ಬೆಳಿಗ್ಗೆ ೧೦-೦೦ಕ್ಕೆ ದಾವಣಗೆರೆಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸಹಯೋಗದೊಡನೆ 'ಎಂ.ವಿ.ಸೀ. ಸಾಹಿತ್ಯ ಸಾಧನೆ ವಿಚಾರಗೋಷ್ಠಿ ಮತ್ತು ಪ್ರಾಚೀನ ಹಸ್ತಪ್ರತಿ ಪ್ರದರ್ಶನ' ಕಾರ್ಯಕ್ರಮವನ್ನು ಕಾಲೇಜಿನ ಸಭಾಂಗಣದಲ್ಲಿ ಏರ್ಪಡಿಸಿತ್ತು. ದಾವಣಗೆರೆಯ ವಿಚಾರವಾದಿ ಪ್ರೊ. ಬಿ.ವಿ. ವೀರಭದ್ರಪ್ಪ ದೀಪ ಬೆಳಗಿಸುವ ಮೂಲಕ ಈ ಕಾರ್ಯಕ್ರಮವನ್ನು ಉದ್ಘಾಟಿಸಿದರು. 'ರಾಘವರ ಕಾವ್ಯ', ವಿಷಯ ಕುರಿತು ನಿವೃತ್ತ ಕನ್ನಡ ಪ್ರಾಧ್ಯಾಪಕರಾದ ಪ್ರೊ. ಎನ್.ಬಿ. ಚಂದ್ರಮೋಹನ್, 'ಎಂ.ವಿ.ಸೀ. ಅವರ ಪಾಂಡಿತ್ಯ'ದ ಬಗ್ಗೆ ಪ್ರಸಿದ್ಧ ಸಾಹಿತಿ ಪ್ರೊ. ಜಿ. ಅಶ್ವತ್ಥನಾರಾಯಣ, 'ಎಂ.ವಿ.ಸೀ. ಅವರ ಕಥಾಸಾಹಿತ್ಯ' ಕುರಿತು ಖ್ಯಾತ ಲೇಖಕಿ ಡಾ. ವಿಜಯಾ ಸುಬ್ಬರಾಜ್, 'ಎಂ.ವಿ.ಸೀ. ಅವರ ಮಕ್ಕಳ ಸಾಹಿತ್ಯ' ಕುರಿತು ಹಿರಿಯ ಸಾಹಿತಿ ಶ್ರೀ ಎಸ್.ವಿ. ಶ್ರೀನಿವಾಸರಾವ್, 'ಎಂ.ವಿ.ಸೀ. ಅವರ ಸಂಶೋಧನೆ, ಸಂಘಟನೆ ಕುರಿತು ಪ್ರತಿಷ್ಠಾನದ ಕಾರ್ಯದರ್ಶಿ ಡಾ. ನಾ. ಗೀತಾಚಾರ್ಯ ಉಪನ್ಯಾಸಗಳನ್ನು ನೀಡಿದರು. ಕಾಲೇಜಿನ ಪ್ರಾಚಾರ್ಯ ಪ್ರೊ. ಡಿ. ಬಸವರಾಜ್ ಅವರು ಅಧ್ಯಕ್ಷತೆ ವಹಿಸಿದ್ದರು ಪ್ರಾರಂಭದಲ್ಲಿ ಸಂಚಾಲಕ ಡಾ. ಕೆ. ನಾರಾಯಣಸ್ವಾಮಿ ಅವರು ಎಲ್ಲರನ್ನೂ ಸ್ವಾಗತಿಸಿ, ಕಾರ್ಯಕ್ರಮ ನಿರೂಪಿಸಿದರು. ಕೊನೆಯಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾದ ಪ್ರೊ. ಮಲ್ಲಿಕಾರ್ಜುನ ಕಲಮರಹಳ್ಳಿ



ಅವರು ವಂದನಾರ್ಪಣೆ ಮಾಡಿದರು. ಈ ಕಾರ್ಯಕ್ರಮ ಸಭಾಂಗಣದ ಮುಂದೆ ಏರ್ಪಡಿಸಿದ್ದ ಪ್ರಾಚೀನ ಹಸ್ತಪ್ರತಿ ಪ್ರದರ್ಶನವನ್ನು ಕಾಲೇಜಿನ ನೂರಾರು ವಿದ್ಯಾರ್ಥಿಗಳು ವೀಕ್ಷಿಸಿ ಈ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿದರು.

ದಿನಾಂಕ: ೨೭-೦೮-೨೦೧೦ ಶುಕ್ರವಾರ ಬೆಳಿಗ್ಗೆ ೧೧-೦೦ ಗಂಟೆಗೆ ತಿಪಟೂರಿನ ಪಲ್ಲಾಗಟ್ಟಿ ಅಡವಪ್ಪ ಕಲಾ ಮತ್ತು ವಾಣಿಜ್ಯ ಕಾಲೇಜು, ಎಂ.ವಿ.ಸೀ. ಅವರ ಜನ್ಮಶತಮಾನೋತ್ಸವದ ಅಂಗವಾಗಿ ವಿಚಾರಗೋಷ್ಠಿ ಹಾಗೂ ಪ್ರಾಚೀನ ಹಸ್ತಪ್ರತಿ ಪ್ರದರ್ಶನವನ್ನು ಕಾಲೇಜಿನ ಶಂಕರಪ್ಪ ಸಭಾಂಗಣದಲ್ಲಿ ಏರ್ಪಡಿಸಿತ್ತು.

ಬೆಂಗಳೂರಿನಿಂದ ತಿಪಟೂರಿಗೆ ಈ ಕಾರ್ಯಕ್ರಮ ನಡೆಸಲು ಹೋಗಿದ್ದ ಹಿರಿಯ ಸಾಹಿತಿ ಶ್ರೀ ಎಸ್.ವಿ. ಶ್ರೀನಿವಾಸ ರಾವ್

ದೀಪ ಬೆಳಗಿ ಕಾರ್ಯಕ್ರಮದ ಉದ್ಘಾಟನೆ ನೆರವೇರಿಸಿ ಪ್ರತಿಷ್ಠಾನ ನಡೆದುಬಂದ ದಾರಿಯನ್ನು ವಿವರಿಸಿ ರಾಜ್ಯಾದಂತ ನಡೆಸಲಾಗುತ್ತಿರುವ ಶತಮಾನೋತ್ಸವ ಸಮಾರಂಭಗಳ ಕಿರು ಪರಿಚಯ ಮಾಡಿಸಿಕೊಟ್ಟರು. ಕಲ್ಪತರು ಕಾಲೇಜಿನ ಪ್ರೊ. ಟಿ.ಎಸ್. ನಾಗರಾಜ ಶೆಟ್ಟಿ ಅವರು ಸ್ವಾಗತ ಭಾಷಣ ಮಾಡಿ ಅತಿಥಿಗಳ ಪರಿಚಯ ಮಾಡಿಕೊಟ್ಟರು. ಕಾಲೇಜಿನ ಪ್ರಾಚಾರ್ಯ ಪ್ರೊ. ಬಿ. ಬೋರೇಗೌಡ ಅಧ್ಯಕ್ಷತೆ ವಹಿಸಿದ್ದರು. 'ರಾಘವರ ಕಾವ್ಯ'ದ ಬಗ್ಗೆ ನಿವೃತ್ತ ಕನ್ನಡ ಪ್ರಾಧ್ಯಾಪಕ ಪ್ರೊ. ಎನ್.ಬಿ. ಚಂದ್ರ ಮೋಹನ್, ಎಂ.ವಿ.ಸೀ. ಅವರ ಮಕ್ಕಳ ಸಾಹಿತ್ಯ ಕುರಿತು ಪ್ರೊ. ಟಿ.ಎನ್. ನಾಗರಾಜಶೆಟ್ಟಿ, 'ಎಂ.ವಿ.ಸೀ. ಅವರ ಹಸ್ತಪ್ರತಿ, ಸಂಶೋಧನೆ, ಸಂಘಟನಾ ಶಕ್ತಿ ಬಗ್ಗೆ ಕನ್ನಡ ಪ್ರಾಧ್ಯಾಪಕ ಡಾ. ನಾ. ಗೀತಾಚಾರ್ಯ, ಎಂ.ವಿ.ಸೀ.



ಅವರ ಪುತ್ರ ಶ್ರೀ ಎಸ್.ಟಿ. ರಾಧಾಕೃಷ್ಣ ಅವರು 'ನಾ ಕಂಡಂತೆ ನನ್ನ ತಂದೆ' ಎಂದು ಕೆಲ ಆತ್ಮೀಯ ವಿಚಾರಗಳನ್ನು ಹಂಚಿಕೊಂಡರು. ಕಲ್ಪತರು ಕಾಲೇಜಿನ ಕನ್ನಡ ವಿಭಾಗದ ಮುಖ್ಯಸ್ಥರು ವಂದನಾರ್ಪನೆ ಮಾಡಿದರು.

**ದಿನಾಂಕ: ೨೭-೦೮-೨೦೧೦ ಶುಕ್ರವಾರ** ೨.೦೦ ಗಂಟೆಗೆ ಚಿಕ್ಕನಾಯಕನಹಳ್ಳಿ ತಾಲ್ಲೂಕು, ಕನ್ನಡ ಸಾಹಿತ್ಯ ಪರಿಷತ್ತು ನವೋದಯ ಪ್ರಥಮ ದರ್ಜೆ ಕಾಲೇಜಿನ ಆವರಣದಲ್ಲಿ ಎಂ.ವಿ.ಸೀ. ಜನ್ಮಶತಮಾನೋತ್ಸವ ಕಾರ್ಯಕ್ರಮವನ್ನು ಏರ್ಪಡಿಸಿತ್ತು.

ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಚಿಕ್ಕನಾಯಕನಹಳ್ಳಿ ಪ್ರಾಚಾರ್ಯರಾದ ಪ್ರೊ. ಕೆ. ಸಿ. ಬಸಪ್ಪ ಅವರು ಅಧ್ಯಕ್ಷತೆ ವಹಿಸಿದ್ದರು. ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು, ಹಿರಿಯ ಸಾಹಿತಿಗಳೂ ಆದ ಪ್ರೊ. ಎಂ.ವಿ. ನಾಗರಾಜ ರಾವ್ ಅವರು ಸ್ವಾಗತ ಭಾಷಣ ಮಾಡಿ, ಜೊತೆಯಾಗಿ ಎಲ್ಲಾ ಅತಿಥಿಗಳ ಪರಿಚಯ ಮಾಡಿಕೊಟ್ಟರು, ಎಂ.ವಿ.ಸೀ. ಅವರ ಮಕ್ಕಳ ಸಾಹಿತ್ಯ ಕುರಿತು ಹಾಗೂ ಎಂ.ವಿ.ಸೀ. ಜೀವನ ಕುರಿತು ಹಿರಿಯ ಸಾಹಿತಿ ಶ್ರೀ ಎಸ್.ವಿ. ಶ್ರೀನಿವಾಸರಾವ್, ಹಸ್ತಪ್ರತಿ ಅಧ್ಯಯನ ಸಂರಕ್ಷಣೆ, ಪ್ರತಿಷ್ಠಾನದ ಕಾರ್ಯದರ್ಶಿ ಡಾ.ನಾ. ಗೀತಾಚಾರ್ಯ, 'ನಮ್ಮ ತಂದೆ' ಎಂದು ಎಂ.ವಿ.ಸೀ. ಅವರ ಪುತ್ರರಾದ ಶ್ರೀ ಎಸ್.ಟಿ. ರಾಧಾಕೃಷ್ಣ ಭಾಷಣ ಮಾಡಿದರು. ಕಾರ್ಯದರ್ಶಿ ಶ್ರೀ ಸಿ. ಗುರುಮೂರ್ತಿ




ಕೊಟಿಗೆಮನೆಯವರು ಕಾರ್ಯಕ್ರಮ ನಿರೂಪಿಸಿ, ವಂದನಾರ್ಪಣೆ ಮಾಡಿದರು. ಬಹುಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಹಸ್ತಪ್ರತಿ ಪ್ರದರ್ಶನ ಪ್ರದರ್ಶಿಸಿ ಈ ಬಗ್ಗೆ ಮಾಹಿತಿ ಸಂಗ್ರಹಿಸಿದರು.

**ದಿನಾಂಕ: ೩೦-೦೮-೨೦೧೦ರ ಎಂ.ವಿ.ಸೀ. ಅವರ ಜನ್ಮಶತಾಬ್ಧಿ ಅಂಗವಾಗಿ** ಕನ್ನಡ ಯುವಜನ ಸಂಘದ ಸಭಾಂಗಣದಲ್ಲಿ ಉಪನ್ಯಾಸ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಕನ್ನಡ ಯುವಜನ ಸಂಘದ ಅಧ್ಯಕ್ಷ ಶ್ರೀ ಜಗದೀಶ ರೆಡ್ಡಿ ಅವರು ಅಧ್ಯಕ್ಷತೆ ವಹಿಸಿದ್ದರು. ಪ್ರೊ. ಜಿ. ಅಶ್ವತ್ಥನಾರಾಯಣ ಅವರು ಎಂ.ವಿ.ಸೀ. ಕುರಿತು ಭಾಷಣ ಮಾಡಿದರು. ಮುಖ್ಯ ಅತಿಥಿಗಳಾಗಿ ಡಾ. ನಾ. ಗೀತಾಚಾರ್ಯ ಗ್ರಂಥ ಸಂಪಾದನೆ ಬಗ್ಗೆ ಮೌಲಿಕ ಮಾಹಿತಿ ನೀಡಿದರು. ಸಂಘದ ಸಂಚಾಲಕ ಶ್ರೀ ಎಂ. ಕೆಂಪಯ್ಯ ವಂದನಾರ್ಪಣೆ ಮಾಡಿದರು.




**ದಿನಾಂಕ: ೦೯-೦೯-೨೦೧೦ ಗುರುವಾರ ರವೀಂದ್ರ ಕಲಾಕ್ಷೇತ್ರದಲ್ಲಿ ನಡೆದ ಎಂ.ವಿ.ಸೀ. ಜನ್ಮ ಶತಮಾನೋತ್ಸವ ಕಾರ್ಯಕ್ರಮ:** ಎಂ.ವಿ.ಸೀ. ಜನ್ಮ ಶತಮಾನೋತ್ಸವವನ್ನು ಹಸ್ತಪ್ರತಿಗಳ ಅಧ್ಯಯನಮುಖೀ ಚಿಂತನೆಯಿಂದ ಅಂತಿಮಗೊಳಿಸಲಾಯಿತು. ದಿನಾಂಕ: ೦೯-೦೯-೨೦೧೦ರಂದು ನಗರದ ರವೀಂದ್ರ ಕಲಾಕ್ಷೇತ್ರದಲ್ಲಿ 'ಹಸ್ತಪ್ರತಿ ಅಧ್ಯಯನಶಾಸ್ತ್ರ' ಎಂಬ ವಿಚಾರದಲ್ಲಿ ರಾಷ್ಟ್ರೀಯ ವಿಚಾರಗೋಷ್ಠಿಯನ್ನು ನಗರದ ಶೇಷಾದ್ರಿಪುರಂ ಕಾಲೇಜಿನ ಸ್ನಾತಕೋತ್ತರ ಕನ್ನಡ ವಿಭಾಗದ ಸಹಯೋಗದಲ್ಲಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಎಂ.ವಿ.ಸೀ. ಶತಮಾನೋತ್ಸವ ಸಮಿತಿ ಸಂಘಟಿಸಿತ್ತು.



**ಉದ್ಘಾಟನೆ :** ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಕಿರೀಟವನ್ನು ತೊಡಿಸಿರುವ ಪ್ರಸ್ತುತ ಸಂದರ್ಭದಲ್ಲಿ ಶಾಸ್ತ್ರೀಯ ಭಾಷೆಯ ಮೂಲ ಹಸ್ತಪ್ರತಿ ಆಕರಗಳ ಬಗೆಗೆ ನಡೆಯುತ್ತಿರುವ ಪೂರ್ಣ ಪ್ರಮಾಣದ ಪ್ರಪ್ರಥಮ ರಾಷ್ಟ್ರೀಯ ವಿಚಾರಗೋಷ್ಠಿ ಆಗಿದೆ. ಕನ್ನಡದ ಪ್ರಾಚೀನ ಸಾಹಿತ್ಯದ ಭಂಡಾರವೇ ಆಗಿರುವ ಹಸ್ತಪ್ರತಿ ಸಂಪತ್ತೇ ನಿಜವಾದ ಶಾಸ್ತ್ರೀಯ ಕನ್ನಡದ ಕಣಜವಾಗಿದೆ. ಇದರಲ್ಲಡಗಿರುವ ನಾನಾ ವಿಷಯಗಳನ್ನು ಹೊರತೆಗೆದು ಇಂದಿನ ಸಾಮಾಜಿಕ ಸಂದರ್ಭದೊಂದಿಗೆ ವಾಗ್ವಾದಕ್ಕೆ ತೆರೆದಿಡುವುದೇ ಈ ಹಸ್ತಪ್ರತಿ ಅಧ್ಯಯನಶಾಸ್ತ್ರದ ಪ್ರಮುಖ ಆಶಯವಾಗಿದೆ. ಡಾ. ಗೀತಾಚಾರ್ಯ ಅವರ ಈ ಪ್ರಯತ್ನವನ್ನು ವಿದ್ವಾಂಸರು ಮುಂದುವರಿಸಬೇಕಾಗಿದೆ. ನಾವೆಲ್ಲ ಅವರೊಂದಿಗೆ ಕೈಜೋಡಿಸಬೇಕಾಗಿದೆ ಎಂದು ಈ ವಿಚಾರಗೋಷ್ಠಿಯನ್ನು ಉದ್ಘಾಟಿಸಿದ ನಾಡಿನ ಪ್ರಸಿದ್ಧ ಸಂಶೋಧಕರಾದ ಡಾ॥ ಎಂ. ಚಿದಾನಂದಮೂರ್ತಿ ಅವರು ಅಭಿಪ್ರಾಯಪಟ್ಟರು. ಇದೇ ಸಂದರ್ಭದಲ್ಲಿ ಎಂ.ವಿ.ಸೀ. ಪುಸ್ತಕ ಮತ್ತು ಚಿತ್ರಗಳ ಪ್ರದರ್ಶನವನ್ನು ಪ್ರಾಚೀನ ಹಸ್ತಪ್ರತಿಗಳ ಪ್ರದರ್ಶನವನ್ನು ಸಂಸ್ಕೃತ ವಿಶ್ವವಿದ್ಯಾಲಯದ ಕುಲಪತಿಗಳಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರು ಉದ್ಘಾಟಿಸಿದರು. ನಾಡಿನ ಹಿರಿಯ ಚೇತನರಾಗಿದ್ದ ಎಂ.ವಿ.ಸೀ.ಯವರು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಮೂಲಕ ಮಾಡಿರುವ ಹಸ್ತಪ್ರತಿ ಕಾರ್ಯ ಎಲ್ಲ ವಿಶ್ವವಿದ್ಯಾಲಯಗಳಿಗೆ ಮಾದರಿಯಾಗಿದೆ. ಕನ್ನಡ ವಿಶ್ವವಿದ್ಯಾಲಯದಲ್ಲಿರುವಂತೆ ಉಳಿದ ವಿಶ್ವವಿದ್ಯಾಲಯಗಳಲ್ಲೂ ಹಸ್ತಪ್ರತಿ ಅಧ್ಯಯನ ವಿಭಾಗಗಳು ಆರಂಭವಾಗಬೇಕು ಎಂದರು. ಬಿ.ಎಂ.ಶ್ರೀ. ಪ್ರತಿಷ್ಠಾನದ ಅಧ್ಯಕ್ಷರಾದ ನಾಡೋಜ ಜಿ. ನಾರಾಯಣರು ಪ್ರಾಸ್ತಾವಿಕ ಭಾಷಣ ಮಾಡಿದರು.



ಪ್ರಸಿದ್ಧ ಹಸ್ತಪ್ರತಿ ತಜ್ಞರಾದ ಪ್ರೊ. ಎನ್. ಬಸವಾರಾಧ್ಯ ಅವರು ಉದ್ಘಾಟನಾ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಬಿ.ಎಂ.ಶ್ರೀ ಪ್ರತಿಷ್ಠಾನದ ಸಾಧನೆಗಳನ್ನೂ ಎಂ.ವಿ.ಸೀತಾರಾಮಯ್ಯನವರ ಕೊಡುಗೆಗಳನ್ನೂ ವಿವರಿಸಿದರು. ಶೇಷಾದ್ರಿಪುರಂ ಕಾಲೇಜಿನ ಪ್ರಾಚಾರ್ಯರಾದ ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು ಸ್ವಾಗತ ಮಾಡಿದರು. ಕನ್ನಡ ವಿಭಾಗದ ಮುಖ್ಯಸ್ಥರಾದ ಪ್ರೊ. ಎನ್. ಬೈರೇಗೌಡ ನಿರೂಪಣೆ ಮಾಡಿದರು. ಸ್ನಾತಕೋತ್ತರ ಕೇಂದ್ರದ ಸಂಚಾಲಕ ನೋಟಕಾರ್ ಸತೀಶ್ ವಂದಿಸಿದರು. ಆರಂಭದಲ್ಲಿ ಕಾಲೇಜಿನ ವಿದ್ಯಾರ್ಥಿ ವೃಂದ ನಾಡಗೀತೆಯನ್ನು ಹಾಡಿದರು.

**ಪ್ರಾಸ್ತಾವಿಕ :** ಈ ಬಗೆಯ ವಿಚಾರಗೋಷ್ಠಿ ರಾಷ್ಟ್ರದಲ್ಲೇ ಪ್ರಥಮವಾಗಿದ್ದು ಹಸ್ತಪ್ರತಿ ಅಧ್ಯಯನವನ್ನೇ ಒಂದು ಸ್ವತಂತ್ರ ಶಾಸ್ತ್ರ ವಿಷಯವನ್ನಾಗಿ ರೂಪಿಸಿರುವ ಪ್ರಯತ್ನಕ್ಕೆ ರಾಷ್ಟ್ರದಲ್ಲಿ ಕರ್ನಾಟಕವೇ ಮೊದಲಾಗಿದೆ. ಹಸ್ತಪ್ರತಿಶಾಸ್ತ್ರದಂತೆ 'ಹಸ್ತಪ್ರತಿ ಅಧ್ಯಯನಶಾಸ್ತ್ರ' ಎಂಬ ಪದವನ್ನೂ ಕರ್ನಾಟಕ ಅದರಲ್ಲೂ ಬಿ.ಎಂ.ಶ್ರೀ. ಪ್ರತಿಷ್ಠಾನ ಭಾರತೀಯ ಮತ್ತು ಇಂಗ್ಲೀಷ್ ವಿಶ್ವಕೋಶ ಹಾಗೂ ನಿಘಂಟುಗಳಿಗೆ ಹೊಸದಾಗಿ ಟಂಕಿಸಿ ಕೊಡುಗೆಯಾಗಿ ನೀಡುತ್ತಿದೆ ಎಂದು ಹಸ್ತಪ್ರತಿ ವಿದ್ವಾಂಸರಾದ ಡಾ. ನಾ. ಗೀತಾಚಾರ್ಯರು ತಿಳಿಸಿದರು.

ಎಂ.ವಿ.ಸೀ.ಯವರು ಆರಂಭಿಸಿದ ಹಸ್ತಪ್ರತಿಶಾಸ್ತ್ರ ಇತ್ತೀಚಿನ ವರ್ಷಗಳಲ್ಲಿ ಸಂಸ್ಕೃತಿ ಚಿಂತನೆಯತ್ತ ಹೊರಳಿದ್ದು ಹಸ್ತಪ್ರತಿಗಳನ್ನು ಕೇವಲ ಗ್ರಂಥಸಂಪಾದನೆಗೆ ಅಥವಾ ಸಂರಕ್ಷಿಸಿ ಹಸ್ತಪ್ರತಿ ಭಂಡಾರದಲ್ಲಿಡುವುದಕ್ಕೆ ಸೀಮಿತಗೊಳಿಸದೆ ಹಸ್ತಪ್ರತಿಗಳನ್ನು ಆಕರ ಸಾಮಗ್ರಿಯಾಗಿ ಪರಿಗಣಿಸಿ ಅವುಗಳಲ್ಲಿ ಅಡಗಿರುವ ಅಪಾರ ಮಾಹಿತಿಗಳನ್ನು ಹೊರತೆಗೆದು ಬಹುಮುಖೀ ಅಧ್ಯಯನಕ್ಕೆ ತೊಡಗಿಸುವ ನೂತನವಿಧಾನಕ್ಕೆ 'ಹಸ್ತಪ್ರತಿ ಅಧ್ಯಯನಶಾಸ್ತ್ರ' ಎಂದು ಕರೆದು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಈಗಾಗಲೇ ತಾನು ನಡೆಸುತ್ತಿರುವ ಹಸ್ತಪ್ರತಿ ತರಗತಿಗಳಲ್ಲಿ ಚಾಲನೆಗೆ ತಂದಿದೆ. ಈ ಶತಮಾನೋತ್ಸವ ವರ್ಷದಲ್ಲಿ ಇದೇ ಹೆಸರಿನ ಗ್ರಂಥವನ್ನೂ ಪ್ರಕಟಿಸಿದೆ. ಇದೀಗ ರಾಷ್ಟ್ರೀಯ ವಿಚಾರಗೋಷ್ಠಿಯ ಮೂಲಕ ವಿದ್ವಜ್ಜನರ ಅಂಕಿತಕ್ಕೆ ವೇದಿಕೆ ರೂಪಿಸಿದೆ. ಮುಂಬಯಿ, ಚೆನ್ನೈ, ಅನಂತಪುರ, ಹಂಪಿ, ಕೋಲಾರ, ಉಡುಪಿ, ಶ್ರವಣಬೆಳಗೊಳ, ಶಿವಮೊಗ್ಗ, ಮೈಸೂರು, ತುಮಕೂರು ಮುಂತಾದ ಕಡೆಗಳಿಂದ ವಿದ್ವಾಂಸರು ಆಗಮಿಸಿದ್ದಾರೆ. ಇದೊಂದು ವಿಶೇಷ ವಿಚಾರ ಗೋಷ್ಠಿಯಾಗಿದೆ ಎಂದು ಡಾ. ನಾ. ಗೀತಾಚಾರ್ಯ ಗೋಷ್ಠಿಯ ಸಂಘಟಕರಾಗಿ, ಶತಮಾನೋತ್ಸವ ಸಮಿತಿಯ ಕಾರ್ಯದರ್ಶಿಯಾಗಿ ವಿಚಾರಗೋಷ್ಠಿಗೆ ಸ್ವಾಗತ ಮಾಡುತ್ತ ಪ್ರಾಸ್ತಾವಿಕ ಮಾತುಗಳನ್ನಾಡಿದರು.

**ಗೋಷ್ಠಿಗಳು :** ಮಧ್ಯಾಹ್ನ ೧೨ ಗಂಟೆಗೆ ನಡೆದ 'ಹಸ್ತಪ್ರತಿಗಳ ಅಧ್ಯಯನ ಕ್ರಮಗಳು' ಎಂಬ ೧ನೇ ಗೋಷ್ಠಿಯಲ್ಲಿ 'ಆಕರ ಸಾಹಿತ್ಯವಾಗಿ ಹಸ್ತಪ್ರತಿಗಳು' ವಿಷಯ ಕುರಿತು ಕನ್ನಡ ವಿ.ವಿ. ಹಸ್ತಪ್ರತಿ ವಿಭಾಗದ ಪ್ರಾಧ್ಯಾಪಕರಾದ ಡಾ.ಎಸ್.ಎಸ್. ಅಂಗಡಿ; 'ಲೌಕಿಕ ಪಠ್ಯಗಳ ಅಧ್ಯಯನ' ವಿಷಯ ಕುರಿತು ಮೈಸೂರು ವಿ.ವಿ. ಹಸ್ತಪ್ರತಿ ವಿಭಾಗದ ಡಾ. ವೈ.ಸಿ. ಭಾನುಮತಿ; 'ಪಾಠಾಂತರ ಅಧ್ಯಯನ'

ವಿಷಯ ಕುರಿತು ಉಡುಪಿಯ ವಿದ್ವಾಂಸರಾದ ಡಾ॥ ಪಾದೇಕಲ್ಲು ವಿಷ್ಣುಭಟ್ಟ ಅವರು ಪ್ರಬಂಧ ಮಂಡಿಸಿದರು. ಮುಂಬಯಿ ವಿ.ವಿ. ವಿಶ್ರಾಂತ ಪ್ರಾಧ್ಯಾಪಕರೂ ಹಿರಿಯ ವಿದ್ವಾಂಸರೂ ಆದ ಡಾ. ತಾಳ್ತಜೆ ವಸಂತಕುಮಾರ್ ಅವರು ಅಧ್ಯಕ್ಷತೆ ವಹಿಸಿ ಇಂತಹ ವಿಚಾರ ಗೋಷ್ಠಿಯನ್ನು ಸಂಘಟಿಸಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಉತ್ತಮ ಕೆಲಸ ಮಾಡಿದೆ ಎಂದು ಶ್ಲಾಘಿಸಿದರು. ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನ ಕನ್ನಡ ಅಧ್ಯಾಪಕರಾದ ಶ್ರೀ ಸಿಸಿರ ಅವರು ವಂದನಾರ್ಪಣೆ ಮಾಡಿದರು. ಶೇಷಾದ್ರಿಪುರಂ ಪದವಿ ಕಾಲೇಜಿನ ಕನ್ನಡ ಅಧ್ಯಾಪಕಿ ಶ್ರೀಮತಿ ಎಚ್. ಎಂ. ಗೀತ ನಿರೂಪಣೆ ಮಾಡಿದರು.

ಮಧ್ಯಾಹ್ನ ೨.೩೦ಕ್ಕೆ ನಡೆದ 'ಹಸ್ತಪ್ರತಿ ಅಧ್ಯಯನದ ಆಯಾಮಗಳು' ಎಂಬ ೨ನೇ ಗೋಷ್ಠಿಯಲ್ಲಿ 'ಹಸ್ತಪ್ರತಿಗಳ ಬಹುಮುಖಿ ಅಧ್ಯಯನ' ಎಂಬ ವಿಷಯವಾಗಿ ಮೈಸೂರಿನ ಹಿರಿಯ ವಿದ್ವಾಂಸರಾದ ಡಾ. ಸೀತಾರಾಮ ಜಾಗೀರದಾರ ಅವರೂ; 'ಹಸ್ತಪ್ರತಿಗಳ ಸಾಂಸ್ಕೃತಿಕ ಅಧ್ಯಯನ' ವಿಷಯವಾಗಿ ಬೆಂಗಳೂರು ವಿ.ವಿ. ಕೋಲಾರ ಸ್ನಾತಕೋತ್ತರ ಕೇಂದ್ರದ ಮುಖ್ಯಸ್ಥರಾದ ಡಾ. ಸಿ. ನಾಗಭೂಷಣ ಅವರೂ ಮತ್ತು 'ಹಸ್ತಪ್ರತಿ ಅಧ್ಯಯನಕ್ಕೆ ಕಂಪ್ಯೂಟರ್ ಬಳಕೆ' ವಿಷಯವಾಗಿ ಕನ್ನಡ ಗಣಕ ಪರಿಷತ್ತಿನ ಶ್ರೀ ಜಿ.ಎನ್. ನರಸಿಂಹಮೂರ್ತಿ ಅವರೂ ಪ್ರಬಂಧ ಮಂಡಿಸಿದರು. ಈ ಗೋಷ್ಠಿಯ ಅಧ್ಯಕ್ಷತೆಯನ್ನು ಅನಂತಪುರ ಕೃಷ್ಣದೇವರಾಯ ವಿಶ್ವವಿದ್ಯಾಲಯದ ಪ್ರಾಧ್ಯಾಪಕರೂ ಹಿರಿಯ ವಿದ್ವಾಂಸರೂ ಆದ ಡಾ. ಆರ್. ಶೇಷಶಾಸ್ತ್ರೀ ನಡೆಸಿಕೊಟ್ಟರು. ಸಮಾರೋಪ ಭಾಷಣವನ್ನು ಹಿರಿಯ ಹಸ್ತಪ್ರತಿ ವಿದ್ವಾಂಸರಾದ ಶ್ರವಣಬೆಳಗೊಳದ ಪ್ರಾಕೃತ ಕೇಂದ್ರದ ಮುಖ್ಯಸ್ಥರಾದ ಶ್ರೀ ಬಿ.ಎಸ್. ಸಣ್ಣಯ್ಯ ಅವರು ಮಾಡುತ್ತ ವಿಶ್ವವಿದ್ಯಾಲಯಗಳು, ಸರ್ಕಾರ, ಹಸ್ತಪ್ರತಿಕ್ಷೇತ್ರದಲ್ಲಿ ಕೆಲಸ ಮಾಡಿರುವ ವಿದ್ವಾಂಸರನ್ನು ಗುರುತಿಸಿ ಗೌರವಿಸುವ ಅಗತ್ಯವಿದೆ ಎಂದು ಹೇಳಿದರು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಎಂ.ಫಿಲ್ ವಿದ್ಯಾರ್ಥಿ ಶ್ರೀ ಬಸವರಾಜಪ್ಪ ಅವರು ಆರಂಭದಲ್ಲಿ ಸ್ವಾಗತಿಸಿದರು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗ್ರಂಥಾಲಯ ಸಂರಕ್ಷಕಿ ಡಾ. ಶ್ಯಾಮಲ ರತ್ನಕುಮಾರಿ ವಂದನಾರ್ಪಣೆ ಮಾಡಿದರು ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನ ಕನ್ನಡ ಅಧ್ಯಾಪಕಿ ಶ್ರೀಮತಿ ಅರ್ಚನ ತೇಜಸ್ವಿ ನಿರೂಪಣೆ ಮಾಡಿದರು.

## ಎಂ.ವಿ.ಸೀ. ಜನ್ಮಶತಮಾನೋತ್ಸವ ಸಮಾರೋಪ

ಹೆಸರಾಂತ ಕವಿ, ಸಾಹಿತಿ, ವಿದ್ವಾಂಸ, ಸಂಘಟಕರಾಗಿದ್ದ ಪ್ರೊ. ಎಂ.ವಿ.ಸೀತಾರಾಮಯ್ಯನವರ ಜನ್ಮಶತಮಾನೋತ್ಸವ ವನ್ನು ಕಳೆದ ವರ್ಷದ ಸೆಪ್ಟೆಂಬರ್ ೯ರಂದು ಆರಂಭಿಸಿ ವಿವಿಧ ಯೋಜನೆಗಳನ್ನು ಹಮ್ಮಿಕೊಂಡು ನಾಡಿನಾದ್ಯಂತ ೬೦ಕ್ಕೂ ಹೆಚ್ಚು ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಆಚರಿಸಲಾಗಿದೆ. ಎಂದು ಎಸ್.ವಿ. ಶ್ರೀನಿವಾಸರಾವ್ ಅವರು ತಿಳಿಸಿದರು. ಈಚೆಗೆ ನಗರದ ರವೀಂದ್ರ ಕಲಾಕ್ಷೇತ್ರದಲ್ಲಿ ನಡೆದ ಎಂ.ವಿ.ಸೀ. ಜನ್ಮ ಶತಮಾನೋತ್ಸವ ಸಮಾರೋಪ ಸಮಾರಂಭದಲ್ಲಿ ಸ್ವಾಗತ ಭಾಷಣ ಮಾಡುತ್ತ, ನಾಡಿನ ಪ್ರಾಚೀನ ಹಸ್ತಪ್ರತಿಗಳ ಸಂರಕ್ಷಣೆಗಾಗಿ ಶ್ರಮಿಸಿ 'ಹಸ್ತಪ್ರತಿಶಾಸ್ತ್ರ' ಎಂಬ ವಿನೂತನ ಶಿಸ್ತನ್ನೂ ರೂಪಿಸಿದ್ದ ಎಂ.ವಿ.ಸೀ.ಯವರ ಶತಮಾನೋತ್ಸವ ವರ್ಷವನ್ನು 'ಹಸ್ತಪ್ರತಿ ಅಧ್ಯಯನ ವರ್ಷ' ಎಂದೇ ಘೋಷಿಸಲಾಗಿತ್ತು. ಶತಮಾನೋತ್ಸವ ಕಾರ್ಯಕ್ರಮ ಎಂದರೆ ಕೇವಲ ಭಾಷಣ–ವ್ಯಕ್ತಿ ಸ್ತುತಿಯಾಗಿರದೆ ಪ್ರಾಚೀನ ಹಸ್ತಪ್ರತಿಗಳ ಪ್ರದರ್ಶನ ಮತ್ತು ಅದರ ಬಗೆಗೆ ಜಾಗೃತಿ ಮೂಡಿಸು ವಂತಹ ಅಪರೂಪದ ಕಾರ್ಯಕ್ರಮವನ್ನಾಗಿ ರೂಪಿಸಲಾಗಿತ್ತು ಎಂದರು.

ಕಾರ್ಯಕ್ರಮವನ್ನು ನಿರೂಪಿಸಿ ಪ್ರಾಸ್ತಾವಿಕ ಮಾತುಗಳನ್ನಾಡಿದ ಡಾ. ನಾ. ಗೀತಾಚಾರ್ಯರು ಇದೊಂದು ಅಪರೂಪದ ವಿಶೇಷ ಕಾರ್ಯಕ್ರಮವೆಂದು ನಾಡಿನಾದ್ಯಂತ ಸಾರ್ವಜನಿಕರಿಂದ ಮೆಚ್ಚುಗೆ ವ್ಯಕ್ತವಾಗಿದೆ. ಕಾರ್ಯಕ್ರಮದ ಸಂದರ್ಭದಲ್ಲಿ ಅನೇಕ ಹಸ್ತಪ್ರತಿ ದಾನಿಗಳಿಂದ ಅಮೂಲ್ಯ ಆಸ್ತಿಯಾದ ಓಲೆಗರಿ–ಕಾಗದದ ಹಸ್ತಪ್ರತಿಗಳು ಪ್ರತಿಷ್ಠಾನಕ್ಕೆ ಕೊಡುಗೆಯಾಗಿ ಬಂದಿವೆ. ಪ್ರತಿಷ್ಠಾನದ ಹಸ್ತಪ್ರತಿ ಸಂಗ್ರಹಾಲಯದದಲ್ಲಿ ಇವುಗಳನ್ನೆಲ್ಲ ಅತ್ಯಂತ ವೈಜ್ಞಾನಿಕವಾಗಿ ಸಂರಕ್ಷಿಸ ಲಾಗುತ್ತಿದೆ. ಇಡೀ ವರ್ಷದಲ್ಲಿ ೬೦ಕ್ಕೂ ಹೆಚ್ಚು ಕಾರ್ಯಕ್ರಮಗಳನ್ನು ನಡೆಸಿ ಪ್ರಾಚೀನ




ಹಸ್ತಪ್ರತಿಗಳ ಬಗ್ಗೆ ಜನರಲ್ಲಿ ಅರಿವು ಮೂಡಿಸುವ ಮೂಲಕ ಎಂ.ವಿ.ಸೀ. ಶತಮಾನೋತ್ಸವವನ್ನು ಅರ್ಥಪೂರ್ಣವಾಗಿ ಆಚರಿಸಲಾಗಿದೆ. ಇನ್ನೂ ಸಂಸ್ಮರಣ ಸಂಪುಟ, ಸಂಚಿಕೆ, ಜೀವನ ಚರಿತ್ರೆ ಹಾಗೂ ಸಮಗ್ರ ಸಂಪುಟಗಳು ಪ್ರಕಟವಾಗ ಬೇಕಾಗಿದ್ದು ಅವುಗಳು ಸಿದ್ಧವಾದಂತೆ ಅವುಗಳನ್ನೂ ಬಿಡುಗಡೆ ಮಾಡಲಾಗುವುದು. ಔಪಚಾರಿಕವಾಗಿ ಕಳೆದ ವರ್ಷ ಇದೇ ದಿನ ಆರಂಭಿಸಿದ ಈ ಯೋಜನೆಯನ್ನು ಯಶಸ್ವಿಯಾಗಿ ಇವು ಪೂರ್ಣಗೊಳಿಸುತ್ತಿದ್ದೇವೆ ಎಂದರು.

ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷರೂ ಹಿರಿಯ ಸಾಹಿತಿಗಳೂ ಆದ ಪ್ರೊ. ಎಂ.ಎಚ್. ಕೃಷ್ಣಯ್ಯ ಅವರು ಸಮಾರೋಪ ಭಾಷಣ ಮಾಡುತ್ತ ಈ ಕಾರ್ಯಕ್ರಮ ಅತ್ಯಂತ ಅರ್ಥಪೂರ್ಣವಾಗಿದೆ ಎಂದರು. ಹಸ್ತಪ್ರತಿಗಳ ಬಗೆಗಿನ ಈ ರಾಷ್ಟ್ರೀಯ ವಿಚಾರಗೋಷ್ಠಿ ಹಸ್ತಪ್ರತಿಗಳ ಸಂಸ್ಕೃತಿ ಅಧ್ಯಯನ ಮುಖವನ್ನು ಅನಾವರಣಗೊಳಿಸಿದೆ. ಹಸ್ತಪ್ರತಿಗಳಲ್ಲಿನ ಚಿತ್ರಕಲೆ ಚರಿತ್ರೆಗೆ ಅಮೂಲ್ಯ ಮಾಹಿತಿ ಗಳಿವೆ ಎಂದು ಹೇಳುತ್ತ ಎಂ.ವಿ.ಸೀ. ಅವರು ಚಿತ್ರಕಲೆ ಮತ್ತು ಹಸ್ತಪ್ರತಿ ಎರಡೂ ಕ್ಷೇತ್ರದಲ್ಲಿ ಗಣನೀಯ ಕೊಡುಗೆ ನೀಡಿರುವುದು ಗಮನಾರ್ಹವಾದದ್ದು ಎಂದರು.

**ಪುಸ್ತಕ ಬಿಡುಗಡೆ :** ಈ ಸಂದರ್ಭದಲ್ಲಿ ಉತ್ಸವ ಸಮಿತಿ ಪ್ರಕಟಿಸಿರುವ ಎಂ.ವಿ.ಸೀ. ಅವರನ್ನು ಮಕ್ಕಳಿಗಾಗಿ ಪರಿಚಯಿಸಿ ಬೆ.ಗೊ. ರಮೇಶ್ ಬರೆದಿರುವ

'ಮಕ್ಕಳ ಎಂ.ವಿ.ಸೀ.' ಮತ್ತು ಎಂ.ವಿ.ಸೀ. ಅವರ ಅಪ್ರಕಟಿತ ನಾಟಕವಾದ 'ತಿರುಕಿಯ ಕನಸು' ಎಂಬ ಎರಡು ಪುಸ್ತಕ ಗಳನ್ನು ಬಿಡುಗಡೆ ಮಾಡಲಾಯಿತು. ಉಪಸ್ಥಿತರಿದ್ದ ಬೆ. ಗೋ. ರಮೇಶ್ ಅವರು ಎಂ.ವಿ.ಸೀ.ಯವರ ಹಿರಿಯ ವ್ಯಕ್ತಿತ್ವವನ್ನು ನೆನಪಿಸಿಕೊಂಡರು. ಎಂ.ವಿ.ಸೀ.ಯವರ ಪುತ್ರರಾದ ಎಂ.ಎಸ್. ಭಾಸ್ಕರ್, ಎಸ್. ಟಿ. ರಾಧಾಕೃಷ್ಣ ಪ್ರಥಮ ಪ್ರತಿಗಳನ್ನು ಸ್ವೀಕರಿಸಿದರು.



ಕನ್ನಡ ಸಂಸ್ಕೃತಿ ಇಲಾಖೆ ಜಂಟಿ ನಿರ್ದೇಶಕರಾದ ಬಿ.ಟಿ. ಮುನಿ ರಾಜಯ್ಯ ಅವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಇಲಾಖೆಯ ವತಿಯಿಂದ ಅಗತ್ಯವಾದ ಎಲ್ಲ ನೆರವನ್ನು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನಕ್ಕೆ ಒದಗಿಸಲಾಗುವುದು ಎಂದರು. ಕವಿಗಳ ಹೆಸರಿನ ಪ್ರತಿಷ್ಠಾನ ಗಳಿಗೆ ಸರ್ಕಾರ ನೀಡುತ್ತಿರುವಷ್ಟೇ ಮೊತ್ತವನ್ನು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನಕ್ಕೂ ಮಂಜೂರು ಮಾಡಲು ಪ್ರಯತ್ನಿಸಲಾಗುವುದು ಎಂದರು. ಇಲಾಖೆ ಸಿದ್ಧಪಡಿಸುತ್ತಿರುವ ಎಂ.ವಿ.ಸೀ. ಸಮಗ್ರ ಸಂಪುಟ ಗಳನ್ನು ಶೀಘ್ರವಾಗಿ ಬಿಡುಗಡೆ ಮಾಡಲಾಗವುದೆಂದರು.

ಉತ್ಸವ ಸಮಿತಿಯ ಗೌರವಾಧ್ಯಕ್ಷರಾದ ನಾಡಿನ ಹಿರಿಯ ವಿದ್ವಾಂಸರಾದ ನಾಡೋಜ ಜಿ. ವೆಂಕಟಸುಬ್ಬಯ್ಯ ಅವರ ಅಧ್ಯಕ್ಷತೆಯಲ್ಲಿ ಇಡೀ ಕಾರ್ಯಕ್ರಮ ನಡೆಯಿತು. ೯೮ ವರ್ಷದ ಈ ಯುವಕರು ಅತ್ಯುತ್ಸಾಹದಿಂದ ಎಂ.ವೀ.ಸಿ.ಯವರ ನೆನಪುಗಳನ್ನು ಸಭಿಕರೊಂದಿಗೆ ಹಂಚಿಕೊಂಡರು. ಈ ವರ್ಷ ಬೆಂಗಳೂರಿನಲ್ಲೇ ನಡೆಯುತ್ತಿರುವ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕೂ ಕನ್ನಡಿಗರು ಇವರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡದೆ ಹೋದರೆ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಸಾಹಿತ್ಯ ಲೋಕದ ಇತಿಹಾಸದಲ್ಲಿ ಒಂದು ಕಪ್ಪು ಚುಕ್ಕೆಯಾಗಿ ಉಳಿದುಬಿಡುತ್ತದೆ. ಎಂದು ನಿರೂಪಕರು ಸೂಚಿಸಿದಾಗ ತುಂಬಿದ ಸಭೆ ಕರತಾಡನದ ಮೂಲಕ ಬೆಂಬಲ ಸೂಚಿಸಿತು.

ಇದು ಎಂ.ವಿ.ಸೀ. ಜನ್ಮ ಶತಮಾನೋತ್ಸವ ಸಮಿತಿಯು ಕಳೆದ ವರ್ಷ ಆರಂಭಿಸಿದ್ದ 'ಎಂ.ವಿ.ಸೀ. ಜನ್ಮ ಶತಮಾನೋತ್ಸವ – ಹಸ್ತಪ್ರತಿ ಅಧ್ಯಯನ ವರ್ಷ' ಅಭಿಯಾನದ ಸಮಾರೋಪ ಸಮಾರಂಭ ವಾಗಿರುತ್ತದೆ. ಪ್ರತಿಷ್ಠಾನ ನಡೆಸುತ್ತಿರುವ ಎಂ.ವಿ.ಸೀ.ಯರ ಕಾರ್ಯಕ್ಷೇತ್ರವಾದ ಹಸ್ತಪ್ರತಿಗಳ ಬಗೆಗಿನ ಈ ವಿಚಾರಗೋಷ್ಠಿ ಅತ್ಯಂತ ಯಶಸ್ವಿಯಾಗಿ ನಡೆದಿದೆ. ಈ ಮೂಲಕ ಮತ್ತು ಎಂ.ವಿ.ಸೀ ಗೀತ ಗಾಯನ : ಶತಮಾನೋತ್ಸವ ಯೋಜನೆ ಪೂರ್ಣವಾಗುತ್ತದೆ. ಎಂದು ವಂದನಾರ್ಪಣೆ ಮಾಡಿದ ಡಾ. ವಿಜಯಾ ಸುಬ್ಬರಾಜ್ ತಿಳಿಸಿದರು.

**ನಾಟಕ ಪ್ರದರ್ಶನ :** ಇಂದು ಬಿಡುಗಡೆಯಾಗುತ್ತಿರುವ 'ತಿರುಕಿಯ ಕನಸು' ನಾಟಕದ ಪ್ರಥಮ ಪ್ರಯೋಗವನ್ನು ಸಂಜೆ ಸವಿಕಲಾನಿಕೇತನದ ಶ್ರೀ ಸವಿರಾಜು ಅವರ ನಿರ್ದೇಶನದಲ್ಲಿ ಅವರ ತಂಡದ ಕಲಾವಿದರಿಂದ ಅಭಿನಯಿಸಲಾಯಿತು. **ಈ ನಾಟಕ ಪ್ರದರ್ಶನಕ್ಕೆ ಕರ್ನಾಟಕ ನಾಟಕ ಅಕಾಡೆಮಿ ಪ್ರಾಯೋಜನೆಯನ್ನು ನೀಡಿತ್ತು.** ಸಮಾರಂಭದಲ್ಲಿ ವಿದುಷಿ ಸುಕನ್ಯ ವಿಜಯಕುಮಾರ್ ಶ್ರೀಮತಿ ರಮಾದೇವಿ ವಿಶ್ವೇಶ್ವರಯ್ಯ, ಶ್ರೀಮತಿ ಮಂಜುಳ ಅವರುಗಳು ಎಂ.ವಿ.ಸೀ. ಗೀತೆಗಳನ್ನು ಹಾಡಿದರು.

ಕಾರ್ಯಕ್ರಮದಲ್ಲಿ ನಾಡಿನ ಬೇರೆ ಬೇರೆ ಭಾಗಗಳಿಂದ ಗಣ್ಯ ಸಾಹಿತಿಗಳು, ವಿದ್ವಾಂಸರು, ಹಸ್ತಪ್ರತಿ ತಜ್ಞರು ಭಾಗವಹಿಸಿದ್ದರು. ತಲಕಾಡಿನ ಚಿಲುಕವಾಡಿಯ, ಕುಮಾರ ನಿಜಗುಣ ಸ್ವಾಮಿಗಳು. ಹಸ್ತಪ್ರತಿ ತಜ್ಞರಾದ ಪ್ರೊ. ಸಿ. ಮಹದೇವಪ್ಪ – ಬೆಂಗಳೂರು, ಡಾ. ಜಿ. ಜಿ. ಮಂಜುನಾಥ್ – ಬೆಂಗಳೂರು, ಡಾ. ಬಿ. ನಂಜುಂಡಸ್ವಾಮಿ – ತುಮಕೂರು, ಡಾ. ಚನ್ನವೀರಪ್ಪ – ಕ.ವಿ.ವಿ.ಹಂಪಿ, ಡಾ. ಎಫ್.ಟಿ. ಹಳ್ಳಿಕೇರಿ – ಕ.ವಿ.ವಿ.ಹಂಪಿ, ಶ್ರೀ ರವೀಂದ್ರನಾಥ್ – ಕ.ವಿ.ವಿ.ಹಂಪಿ, ಡಾ. ವಿಘ್ನರಾಜ್– ಧರ್ಮಸ್ಥಳ, ಪ್ರೊ. ಡಿ. ಲಿಂಗಯ್ಯ – ಬೆಂಗಳೂರು, ಡಾ. ಎಂ.ಎಲ್. ಲಲಿತಮ್ಮ – ಬೆಂಗಳೂರು, ಡಾ. ವೆಂಕಟೇಶ ಜೋಯಿಸ್ – ಕುವೆಂಪು ವಿ.ವಿ, ಶಿವಮೊಗ್ಗ, ಡಾ. ದೇವರಕೊಂಡಾರೆಡ್ಡಿ – ಬೆಂಗಳೂರು, ಪ್ರೊ. ಎನ್.ಬಿ. ಚಂದ್ರಮೋಹನ್ – ಬೆಂಗಳೂರು, ಡಾ. ಜಿ.ಬಿ. ಹರೀಶ್ – ಬೆಂಗಳೂರು, ಪ್ರೊ. ಜಿ. ಅಶ್ವತ್ಥನಾರಾಯಣ – ಬೆಂಗಳೂರು, ಡಾ. ಆರ್. ಲಕ್ಷ್ಮೀನಾರಾಯಣ್ – ಬೆಂಗಳೂರು, ಡಾ. ಕೆ.ಆರ್. ಗಣೇಶ್ – ಬೆಂಗಳೂರು, ಡಾ. ವಿಜಯಾ ಸುಬ್ಬರಾಜ್ – ಬೆಂಗಳೂರು, ಡಾ.ಪಿ.ವಿ.ಕೃಷ್ಣಮೂರ್ತಿ–ಬೆಂಗಳೂರು, ಡಾ. ಎಚ್.ಎಸ್. ಗೋಪಾಲರಾವ್ – ಬೆಂಗಳೂರು, ಪ್ರೊ. ರಾಮರಾವ್ ಕುಲಕರ್ಣಿ– ಬೆಂಗಳೂರು, ಪ್ರೊ. ಎಚ್.ವಿ. ಶ್ರೀನಿವಾಸಶರ್ಮ – ಬೆಂಗಳೂರು, ಡಾ. ಸಿ.ಯು. ಮಂಜುನಾಥ್ – ಬೆಂಗಳೂರು, ಡಾ. ಮಂಗಳಾ ಪ್ರಿಯದರ್ಶಿನಿ – ಬೆಂಗಳೂರು, ಡಾ. ಎಸ್.ವಿ. ಪ್ರಭಾವತಿ – ಬೆಂಗಳೂರು, ಡಾ. ಕಂಟನ ಕುಂಟೆ ರಂಗನಾಥ್ – ಬೆಂಗಳೂರು, ಶ್ರೀ ಜಯಸಿಂಹ – ಬೆಂಗಳೂರು ಮುಂತಾದವರು ವಿಶೇಷ ಆಹ್ವಾನಿತರಾಗಿ ಉಪಸ್ಥಿತರಿದ್ದರು.

**ಪ್ರಾಚೀನ ಹಸ್ತಪ್ರತಿ ಮತ್ತು ಎಂ.ವಿ.ಸೀ. ಪುಸ್ತಕ ಚಿತ್ರಗಳ ಪ್ರದರ್ಶನ :** ಸಮಾರಂಭದಲ್ಲಿ ಕಲಾಕ್ಷೇತ್ರದ ಆವರಣದಲ್ಲಿ ಪ್ರಾಚೀನ ಹಸ್ತಪ್ರತಿಗಳ ಪ್ರದರ್ಶನವನ್ನು ವ್ಯವಸ್ಥೆ ಮಾಡಲಾಗಿತ್ತು. ಸಭಿಕರು ನೋಡಿ ಮೆಚ್ಚುಗೆ ವ್ಯಕ್ತಪಡಿಸಿದರು ಶ್ರೀ ವಿ.ಎಸ್. ಮೂರ್ತಿ, ಧೀರೇಂದ್ರ, ನಿರಂಜನ, ವೆಂಕಟೇಶ್. ಅವರುಗಳು ಇದರ ಜವಾಬ್ದಾರಿವಹಿಸಿ ನೋಡುಗರಿಗೆ ಅಗತ್ಯ ಮಾಹಿತಿಗಳನ್ನು ನೀಡಿದರು. ಇದೊಂದು ಅಪರೂಪದ ಪ್ರದರ್ಶನ ವೆಂದೂ ನೋಡುವ ಅವಕಾಶ ಲಭಿಸಿದ್ದು ನಮ್ಮ ಜೀವಮಾನದ ವಿಶೇಷ ಅನುಭವವೆಂದೂ ಸಭಿಕರು ಮನಸಾರೆ ಅಭಿನಂದಿಸಿದರು.

ಎಂ.ವಿ.ಸೀ. ಅವರ ಪುಸ್ತಕಗಳ ಪ್ರದರ್ಶನವನ್ನೂ ಚಿತ್ರಕಲೆಗಳ ಪ್ರದರ್ಶನವನ್ನೂ ಪತ್ರಿಕಾ ವರದಿಗಳ ಪ್ರದರ್ಶನವನ್ನು ಮಾಡಲಾಗಿತ್ತು. ಶ್ರೀ ವಾದಿರಾಜ್, ಶ್ರೀಗಂಗಾಧರ್, ಡಾ. ಶ್ಯಾಮಲಾ ರತ್ನಕುಮಾರಿ, ಶ್ರೀ ಗುರುಪ್ರಸಾದ್ ಅವರುಗಳು ಇದರ ಜವಾಬ್ದಾರಿ ವಹಿಸಿದ್ದರು.

ಇಡೀದಿನ ಪ್ರತಿಷ್ಠಾನದ ಪುಸ್ತಕಗಳ ಪ್ರದರ್ಶನ ಮತ್ತು ಮಾರಾಟದ

ವ್ಯವಸ್ಥೆಯೂ ಇತ್ತು. ವಿಚಾರಗೋಷ್ಠಿಯಲ್ಲಿ ಭಾಗವಹಿಸಿದ್ದವರಲ್ಲಿ ನೂರಕ್ಕೂ ಹೆಚ್ಚು ಜನ ಕಾಲೇಜು ಕನ್ನಡ ಅಧ್ಯಾಪಕರು ಮತ್ತು ಬೆಂಗಳೂರು ವಿ.ವಿ.ಯ ಸ್ನಾತಕೋತ್ತರ ಕೇಂದ್ರಗಳ ಕನ್ನಡ ಎಂ.ಎ ವಿದ್ಯಾರ್ಥಿಗಳು ಹಾಗೂ ಬೆಂಗಳೂರಿನ ವಿವಿಧ ಕಾಲೇಜುಗಳ ಐಚ್ಛಿಕ ಕನ್ನಡ ವಿದ್ಯಾರ್ಥಿಗಳು ಮತ್ತು ಶೇಷಾದ್ರಿಪುರಂ ಕಾಲೇಜಿನ ವಿದ್ಯಾರ್ಥಿಗಳು ಇದ್ದರು. ಎಲ್ಲರಿಗೂ ಪ್ರಮಾಣಪತ್ರ, ಪೆನ್ನು, ಫೈಲು ಮತ್ತು ಎಂ.ವಿ.ಸೀ. ಅವರ ಮಾದನ ಮಗಳು ಪುಸ್ತಕವನ್ನು ವಿತರಿಸಲಾಯಿತು. ಕಲಾ ಕ್ಷೇತ್ರ ಇಡೀ ದಿನ ಕಿಕ್ಕಿರಿದು ತುಂಬಿದ್ದು ಅತಿಥಿಗಳ ಮೆಚ್ಚುಗೆಗೆ ಪಾತ್ರವಾಗಿತ್ತು.

**ದಿನಾಂಕ: ೨೭-೦೯-೨೦೧೦ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಎಂ.ವಿ.ಸೀ. ಜನ್ಮ ಶತಮಾನೋತ್ಸವ ಸಮಿತಿ ಮತ್ತು ಹಿರಿಯಡ್ಕ (ಉಡುಪಿ ಜಿಲ್ಲೆ)ದ ಸರ್ಕಾರಿ ಪ್ರಥಮ ದರ್ಜೆ ಕಾಲೇಜು** ಎಂ.ವಿ.ಸೀ. ಜನ್ಮ ಶತಮಾನೋತ್ಸವ ಹಾಗೂ ಪ್ರಾಚೀನ ಹಸ್ತಪ್ರತಿ ಪ್ರದರ್ಶನ ಕಾರ್ಯಕ್ರಮ ನಡೆಸಿದವು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಕಾಲೇಜಿನ ಪ್ರಾಂಶುಪಾಲರು ಡಾ. ಪಾದೇಕಲ್ಲು ವಿಷ್ಣುಭಟ್ಟ ವಹಿಸಿದ್ದರು, ಹಿರಿಯ ಸಾಹಿತಿ ಶ್ರೀ ಎಸ್.ವಿ. ಶ್ರೀನಿವಾಸರಾವ್ ಕಾರ್ಯಕ್ರಮ ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಪ್ರೊ. ಕೆ.ಎಸ್. ಮಧುಸೂದನ ಮತ್ತು ಡಾ. ನಾ. ಗೀತಾಚಾರ್ಯ ಅವರುಗಳು ಎಂ.ವಿ.ಸೀ. ಅವರ ಜೀವನ ಹಾಗೂ ಪ್ರಾಚೀನ ಹಸ್ತಪ್ರತಿಗಳ ಬಗ್ಗೆ ವಿದ್ವತ್‌ಪೂರ್ಣ ಭಾಷಣ ನೀಡಿದರು, ಕನ್ನಡ ವಿಭಾಗದ ಮುಖ್ಯಸ್ಥರು ಸರ್ವರನ್ನು ಸ್ವಾಗತಿಸಿ ಕೊನೆಯಲ್ಲಿ ಎಲ್ಲರನ್ನೂ ವಂದಿಸಿದರು.

**ದಿನಾಂಕ: ೨೭-೦೯-೨೦೧೦ರ ಮಧ್ಯಾಹ್ನ ೧.೨ ಗಂಟೆಗೆ** ಮಂಗಳೂರಿನ ಸೈಂಟ್ ಆಗ್ನೇಸ್ ಮಹಿಳಾ ಕಾಲೇಜಿನಲ್ಲಿ ಎಂ.ವಿ.ಸೀ. ಜನ್ಮ ಶತಮಾನೋತ್ಸವ ಹಾಗೂ ಹಸ್ತಪ್ರತಿ ಪ್ರದರ್ಶನ ಕಾರ್ಯಕ್ರಮ ಏರ್ಪಡಿಸಲಾಗಿತ್ತು.

ಕನ್ನಡ ವಿಭಾಗದ ಮುಖ್ಯಸ್ಥ ಪ್ರೊ. ಭೂಮಿಗೌಡ ಅವರು ಸರ್ವರನ್ನೂ ಸ್ವಾಗತಿಸಿದರು. ಪ್ರೊ. ಸಂಪೂರ್ಣಯ್ಯ ಪ್ರಾಸ್ತಾವಿಕ ಭಾಷಣ ಮಾಡಿದರು. ಪ್ರೊ. ಕೆ.ಎಸ್. ಮಧುಸೂದನ, ಶ್ರೀ ಎಸ್.ವಿ. ಶ್ರೀನಿವಾಸರಾವ್, ಡಾ. ನಾ. ಗೀತಾಚಾರ್ಯ ಅವರು ಎಂ.ವಿ.ಸೀ. ಅವರ ಕೊಡುಗೆ, ಪ್ರತಿಷ್ಠಾನದ ಬಗ್ಗೆ ಮಾಹಿತಿ, ಹಾಗೂ ಪ್ರಾಚೀನ ಹಸ್ತಪ್ರತಿಗಳ ಸಂರಕ್ಷಣೆ, ಸಂಪಾದನೆ ಬಗ್ಗೆ ಮೌಲಿಕ ಭಾಷಣಗಳನ್ನು ಮಾಡಿದರು. ಹಸ್ತಪ್ರತಿಗಳ ಪ್ರದರ್ಶನವನ್ನು ನೂರಾರು ವಿದ್ಯಾರ್ಥಿಗಳು ವೀಕ್ಷಿಸಿ ಆ ಬಗ್ಗೆ ಮಾಹಿತಿ ಸಂಗ್ರಹಿಸಿದರು. ❒

## ಅಭಿನಂದನೆಗಳು

- **ನೆಕ್ಸ್ಟ್ ಸ್ಟೆಪ್ ಫೌಂಡೇಷನ್ ಪ್ರಶಸ್ತಿ – ೨೦೧೦** : ಅಂತರರಾಷ್ಟ್ರೀಯ ಕಾನೂನು ಸಹಕಾರ ಕ್ಷೇತ್ರಕ್ಕೆ ಸಲ್ಲಿಸಿದ ಕೊಡುಗೆಗಾಗಿ ನೀಡಲಾಗುವ ಈ ಪ್ರಶಸ್ತಿ ಕೇಂದ್ರ ಸರ್ಕಾರದ ಕಾನೂನು ಮಂತ್ರಿ **ಡಾ. ವೀರಪ್ಪ ಮೊಯಿಲಿ** ಅವರಿಗೆ ಲಂಡನ್‌ನಲ್ಲಿ ನೀಡಲಾಗಿದೆ.
- **ಮಾಧ್ಯಮ ಅಕಾಡೆಮಿ ಪ್ರಶಸ್ತಿ : ಟಿಎಸ್ಸಾರ್ ಪ್ರಶಸ್ತಿ (೨೦೦೭)** : ಶಿವಾನಂದ ಜೋಶಿ ಅವರಿಗೆ, ೨೦೦೮ನೇ ಪ್ರಶಸ್ತಿ, ದಿವಂಗತ ಡಾ.ಬಿ.ವಿ. ವೈಕುಂಠರಾಜು ಅವರಿಗೆ, ೨೦೦೯ನೇ ಪ್ರಶಸ್ತಿ, ಶ್ರೀ ರಾಜಶೇಖರ ಕೋಟಿ ಅವರುಗಳಿಗೆ ನೀಡಲಾಗಿದೆ.
- **ಅಭಿವೃದ್ಧಿ ಪತ್ರಿಕೋದ್ಯಮ ಪ್ರಶಸ್ತಿ** : ಈಶ್ವರ ದೈತೋಟ–೨೦೦೭, ಶ್ರೀ. ಸಿ.ಯು. ಬೆಳ್ಳಕ್ಕಿ–೨೦೦೮, ಅನಿತಾ ಪೈಲೂರು–೨೦೦೯ ಅವರಿಗೆ; ಪರಿಸರ ಪತ್ರಿಕೋದ್ಯಮದ ಪ್ರಶಸ್ತಿ, ಜಿ. ಕೃಷ್ಣಪ್ರಸಾದ್ (೨೦೦೭) ಟಿ.ಆರ್. ಅನಂತರಾಮು– ೨೦೦೮; ರಾಧಾಕೃಷ್ಣಭತ್ತಿ – ೨೦೦೯ ಅವರುಗಳಿಗೆ ನೀಡಲಾಗಿದೆ.
- **ಟ್ಯಾಗೋರ್ ಅಧ್ಯಯನ ಪೀಠದ ಅಧ್ಯಕ್ಷತೆ** : ಡಾ. ಯು. ಆರ್. ಅನಂತಮೂರ್ತಿ ಅವರು ಅಧ್ಯಕ್ಷರಾಗಿ ನಿಯುಕ್ತಗೊಂಡಿರುತ್ತಾರೆ. ಇದು ಇಂದಿರಾಗಾಂಧಿ ರಾಷ್ಟ್ರೀಯ ಮುಕ್ತ ವಿಶ್ವವಿದ್ಯಾಲಯದ ರವೀಂದ್ರನಾಥ್ ಟ್ಯಾಗೋರ್ ಭಾರತೀಯ ಸಾಹಿತ್ಯ ಅಧ್ಯಯನ ಪೀಠದ ಗೌರವ ಅಧ್ಯಕ್ಷ ಸ್ಥಾನವಾಗಿದೆ.
- **ವರ್ಧಮಾನ ಪ್ರಶಸ್ತಿ** : ಡಾ. ಎಚ್.ಎಸ್. ರಾಘವೇಂದ್ರರಾವ್ ಅವರ 'ತರು ತಳೆದ ಪುಷ್ಪ' ಕೃತಿಗೆ, ಹೊಸ ಪೀಳಿಗೆಯ ಕಥೆಗಾರ ಪ್ರಶಸ್ತಿ ವಾಸುಧೇಂದ್ರ ಅವರ 'ಯುಗಾದಿ' ಕಥಾ ಸಂಕಲನಕ್ಕೆ ಲಭಿಸಿದೆ.
- **ಅನುಪಮಾ ಪ್ರಶಸ್ತಿ** : ಲೇಖಕಿಯರ ಸಂಘ ನೀಡುವ ಈ ಪ್ರಶಸ್ತಿ ಶ್ರೀಮತಿ ಸರೋಜಾ ನಾರಾಯಣ ಅವರಿಗೆ ಸಂದಿದೆ.
- **ಬಾಲಸಾಹಿತ್ಯ ಪುರಸ್ಕಾರ** : ಕೇಂದ್ರ ಸಾಹಿತ್ಯ ಅಕಾಡೆಮಿ ಹೊಸದಾಗಿ ಪ್ರಾರಂಭಿಸಿರುವ ಬಾಲ ಸಾಹಿತ್ಯ ಪುರಸ್ಕಾರ (೫೦,೦೦೦ + ಪದಕ) ಬೊಳುವಾರು ಮಹಮದ್ ಕುಞ ಅವರ 'ಪಾಪು ಗಾಂಧಿ ಬಾಪುಗಾಂಧಿ ಆದ ಕತೆ'ಗೆ ಲಭಿಸಿದೆ.
- **ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ ವಿದ್ವತ್ ದತ್ತಿ ಪ್ರಶಸ್ತಿ**: ವಿದ್ವತ್ ಕ್ಷೇತ್ರದಲ್ಲಿ ಕೃಷಿ ಮಾಡಿರುವ ಸಾಹಿತಿಗೆ ನೀಡಲಾಗುವ ಈ ವರ್ಷದ ಪ್ರಶಸ್ತಿ ಪ್ರೊ. ಜಿ. ಅಬ್ದುಲ್ ಬಷೀರ್ ಅವರಿಗೆ ನೀಡಲಾಗಿದೆ.
- **ಗೋಕಾಕ ಪ್ರಶಸ್ತಿ** : ನಾಡೋಜ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರಿಗೆ ವಿನಾಯಕ ಗೋಕಾಕ ವಾಙ್ಮಯ ಟ್ರಸ್ಟ್ ವತಿಯಿಂದ ಈ ಪ್ರಶಸ್ತಿಯನ್ನು ನೀಡಲಾಗಿದೆ.
- **ಪಾದೂರು ಪ್ರಶಸ್ತಿ** : ಸುಪ್ರಸಿದ್ಧ ಇತಿಹಾಸ ತಜ್ಞ, ಸಂಶೋಧಕ, ದಿವಂಗತ ಡಾ. ಪಾದೂರು ಗುರುರಾಜ ಭಟ್ಟರ ನೆನಪಿಗಾಗಿ ಇತಿಹಾಸ ಅಥವಾ ಇತರ ಮಾನವಿಕ ವಿಭಾಗದಲ್ಲಿ ಸಂಶೋಧನೆ ಮೂಲಕ ವಿದ್ವತ್ ಪ್ರಪಂಚಕ್ಕೆ ದಾಖಲೆ ಕೊಡುಗೆ ನೀಡಿ ವಿದ್ವಾಂಸರಿಗೆ ಕೊಡಮಾಡುವ ಈ ಪ್ರಶಸ್ತಿ ಡಾ. ಚಿದಾನಂದ ಮೂರ್ತಿ ಅವರಿಗೆ ನೀಡಲಾಗಿದೆ. ❒

*ಮೇಲ್ಕಂಡ ಎಲ್ಲಾ ಸನ್ಮಾನ್ಯರುಗಳಿಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಹಾರ್ದಿಕ ಅಭಿನಂದನೆಯೊಡನೆ ಶುಭಾಶಯ ಕೋರುತ್ತದೆ.*

# ಎಂ.ವಿ.ಸೀ. ಜನ್ಮ ಶತಮಾನೋತ್ಸವ ನಿಧಿ

೧) ಡಾ. ನಾ. ಗೀತಾಚಾರ್ಯ, ಬೆಂಗಳೂರು ೪೦೦-೦೦

೨) ಶ್ರೀ ಎಸ್.ಟಿ. ರಾಧಾಕೃಷ್ಣ, ಬೆಂಗಳೂರು ೨೦೦-೦೦

೩) ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹಿರಿಯಡ್ಕ ೧,೦೦೦-೦೦

## ಗ್ರಂಥದಾನ

೧) ಶ್ರೀ ಎಸ್. ವಿ. ಶ್ರೀನಿವಾಸರಾವ್, ಬೆಂಗಳೂರು ೧೮

೨) ಕರ್ನಾಟಕ ಸಂಘ, ಶಿವಮೊಗ್ಗ ೮

೩) ಡಾ. ತೀ.ನಂ. ಶಂಕರನಾರಾಯಣ, ಶಿವಮೊಗ್ಗ ೫

೪) ಪ್ರೊ. ಎಲ್.ಎಸ್. ಶೇಷಗಿರಿರಾವ್, ಬೆಂಗಳೂರು ೧

## ಪ್ರತಿಷ್ಠಾನಕ್ಕೆ ದಾನ

ರಾಘವ ಪ್ರಕಾಶನ ದತ್ತಿ ನಿಧಿಗೆ (ಸಪ್ನ ಬುಕ್ ಹೌಸ್, ಬೆಂಗಳೂರು)
- ರಾಯಧನ- ೧೨,೮೨೫-೦೦

ಪುಸ್ತಕ (ಶಾಸ್ತ್ರ ಸಾಹಿತ್ಯ)

## ಇತ್ತೀಚಿನ ಪ್ರಕಟಣೆಗಳು

೧) ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತ,
*ಸಂಪಾದಕರು - ಡಾ. ನಾ. ಗೀತಾಚಾರ್ಯ,* ಬೆಲೆ : ರೂ. ೧೦೦/-

೨) ಬಿ.ಎಂ.ಶ್ರೀಕಂಠಯ್ಯ, ಜೀವನ-ಸಾಧನೆ
*ಸಂಪಾದಕರು - ಡಾ. ನಾ. ಗೀತಾಚಾರ್ಯ,* ಬೆಲೆ : ರೂ. ೧೦೦/-

೩) ಮಕ್ಕಳ ಎಂ.ವಿ.ಸೀ.
*ಸಂಪಾದಕರು - ಬೆ.ಗೋ. ರಮೇಶ್,* ಬೆಲೆ : ರೂ. ೨೦/-

೪) ತಿರುಕಿಯ ಕನಸು *ಲೇ : ಎಂ.ವಿ.ಸೀ.* ಬೆಲೆ : ರೂ. ೫೦/-

**ದಾನಿಗಳಿಗೆ ಪ್ರತಿಷ್ಠಾನ ಹೃತ್ಪೂರ್ವಕವಾದ ಕೃತಜ್ಞತೆ ಅರ್ಪಿಸುತ್ತದೆ**

## ಶ್ರದ್ಧಾಂಜಲಿ

**೨೨-೦೭-೨೦೧೦ : ಎಸ್.ಕೆ. ಹರಿಹರೇಶ್ವರ** (೧೯೩೬-೨೦೧೦) : ಅಮೆರಿಕಾದಲ್ಲಿ ಕನ್ನಡದ ಬೀಜ ಬಿತ್ತಿದ ನುಡಿ ಕೃಷಿಕ ಎಸ್.ಕೆ. ಹರಿಹರೇಶ್ವರ ಅವರು ಬೆಂಗಳೂರಿನಲ್ಲಿ ನಿಧನರಾದರು. ಇವರು ಅಮೆರಿಕಾದಲ್ಲಿ 'ಅಮೇರಿಕನ್ನಡ (೧೯೮೪) ಎಂಬ ಪತ್ರಿಕೆಯನ್ನು ಬಹಳ ವರ್ಷ ನಡೆಸುತ್ತಿದ್ದರು. ಇವರು ಒಳ್ಳೆಯ ಸಾಹಿತ್ಯ ವಿದ್ವಾಂಸರು, ಸಾಹಿತ್ಯ ಸಂಚಾಲಕರು, ಸಂಘಟಕರು, ಸಾಮಾಜಿಕ ಕಾರ್ಯಕರ್ತರೂ ಆಗಿದ್ದು ಕನ್ನಡ ನಾಡು ನುಡಿಗೆ ಅನುಪಮ ಸೇವೆಯನ್ನು ಸಲ್ಲಿಸಿದ್ದರು.

೦೭-೦೮-೨೦೧೦ : ಬಹುಮುಖ ಪ್ರತಿಭಾವಂತ ಸಾಹಿತಿ, ಖ್ಯಾತ ವಿಮರ್ಶಕ **ಪ್ರೊ. ಕಿ. ರಂ. ನಾಗರಾಜ** ಅವರು ನಿಧನರಾದರು. ಇತ್ತೀಚೆಗೆ ಇವರು ಕನ್ನಡ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ ಹಾಗೂ 'ಜಿ.ಪಿ. ರಾಜರತ್ನಂ ಸಾಹಿತ್ಯ ಪ್ರಚಾರಕ' ಪ್ರಶಸ್ತಿಗೆ ಪಾತ್ರರಾಗಿದ್ದರು.

೧೭-೦೯-೨೦೧೦ : **ಡಾ. ಪಂಡಿತ ಪುಟ್ಟರಾಜ ಗವಾಯಿ** (೯೭) (ಜನನ: ೦೩-೦೩-೧೯೧೪) ಗದಗದಲ್ಲಿ ಶಿವೈಕ್ಯರಾದರು. ಪದ್ಮಭೂಷಣ, ಕಾಳಿದಾಸ ಸಮ್ಮಾನ್, ಬಸವಶ್ರೀ ಪ್ರಶಸ್ತಿ, ಗೌರವ ಡಾಕ್ಟರೇಟ್, ರಾಜ್ಯೋತ್ಸವ ಪ್ರಶಸ್ತಿ, ಕನಕಪುರಂದರ ಪ್ರಶಸ್ತಿ; ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ದಸರಾ ಸಂಗೀತ ವಿದ್ವಾನ್ ಪ್ರಶಸ್ತಿ; ನಾಡೋಜ ಮುಂತಾದ ಪ್ರತಿಷ್ಠಿತ ಪ್ರಶಸ್ತಿಗಳಿಗೆ ಭಾಜನರಾಗಿದ್ದರು. ಬಹುಶ್ರುತ ಗಾನವಿಶಾರದ, ಖ್ಯಾತ ಸಾಹಿತ್ಯ ವಿದ್ವಾಂಸರಾಗಿದ್ದರು. ಇವರು ಸಕಲವಾದ್ಯ ಕಂಠೀರವ ಸಹ ಆಗಿದ್ದರು. ಇವರು ರಚಿಸಿರುವ ಪ್ರಮುಖ ಕೃತಿ, 'ಬಸವ ಪುರಾಣ', ಇವರು ತ್ರಿಭಾಷಾ ಪಂಡಿತರೂ ಆಗಿದ್ದರು. ಇವರು ಕುರುಡರಾಗಿದ್ದರೂ ಸಂಗೀತ ಸಾಹಿತ್ಯ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸಿ ವಿಶ್ವಾದ್ಯಂತ ಖ್ಯಾತರಾಗಿದ್ದರು.

೧೪-೦೮-೨೦೧೦ : ಹಿರಿಯ ಪತ್ರಕರ್ತ **ಶ್ರೀ ಶ್ರೀಧರ ಆಚಾರ್ಯ** (೬೭) ಅವರು ನಿಧನರಾದರು. ಪ್ರಜಾವಾಣಿ, ಸಂಯುಕ್ತ ಕರ್ನಾಟಕ ಪತ್ರಿಕೆಗಳಲ್ಲಿ ಉಪಸಂಪಾದಕರಾಗಿ ಸೇವೆ ಸಲ್ಲಿಸಿದ್ದರು. ಮಾಧ್ಯಮ ಅಕಾಡೆಮಿ ಪ್ರಶಸ್ತಿಗೂ ಪಾತ್ರರಾಗಿದ್ದರು.

ಮೇಲ್ಕಂಡ ದಿವಂಗತರಿಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಗೌರವ ಪೂರ್ವಕವಾಗಿ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

**ಅಚ್ಚಾದ ಪುಸ್ತಕ**

ತೆರೆದ-ಅಂಚೆ



*ವಿಳಾಸ*
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ : ೨೬೬೧೫೮೭೭

ಶ್ರೀಮತಿ/...

13. ಶ್ರೀ ಬಿ.ಎಸ್. ಕೃಷ್ಣಸ್ವಾಮಿ
ನಂ. [illegible], ೩ನೇ ಅಡ್ಡರಸ್ತೆ,
ಡಾಕ್ಟರ್ಸ್ ಕಾಲೋನಿ, ಕೋಣನಕುಂಟೆ.
ಬೆಂಗಳೂರು - 560 062.




ಮುದ್ರಕರು : ಇಳಾ ಮುದ್ರಣ, ನಂ. ೩೬, ೪೦ ಅಡಿ ರಸ್ತೆ, ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು - ೨೬. ☎ : ೨೬೭೫೭೧೫೯
'ವಾರ್ತಾಪತ್ರ' ಪ್ರಾಯೋಜಕರು: ಇಳಾ ಮುದ್ರಣ, ಬೆಂಗಳೂರು-೨೬.